ಕುರ್‌ಆನ್ ಮತ್ತು ಪ್ರವಾದಿ ಚರ್ಯೆಯ ತತ್ವಾದರ್ಶಗಳನ್ನು ಸಾರುವ

# ಪವಿತ್ರ ಸಂದೇಶ

ಕನ್ನಡ ಪಾಕ್ಷಿಕ

| ಚಂದಾದರ ವಿವರ | | |
|---|---|---|
| ದೇಶ | | |
| ವಾರ್ಷಿಕ | ₹ | 200-00 |
| ಅರ್ಧ ವಾರ್ಷಿಕ | ₹ | 100-00 |
| ಬಿಡಿ ಪ್ರತಿ | ₹ | 10-00 |
| ಗಲ್ಫ್ ರಾಷ್ಟ್ರಗಳಿಗೆ | | |
| ವಾರ್ಷಿಕ | ₹ | 1,500-00 |
| ಅರ್ಧ ವಾರ್ಷಿಕ | ₹ | 750-00 |

❖ ಸಂಪುಟ: 18 ❖ ಸಂಚಿಕೆ: 8 ❖ ಪುಟ: 12 ❖ ಏಪ್ರಿಲ್ 16-30, 2014 ❖ ಬೆಲೆ: 10/- http://www.salafimangalore.org

## ಸೃಷ್ಟಿಸುವವನು ಮತ್ತು ಏನನ್ನೂ ಸೃಷ್ಟಿಸದವನು ಸರಿ ಸಮಾನರೇ? ನೀವೇಕೆ ಚಿಂತಿಸುವುದಿಲ್ಲ...!

ಜಗತ್ತಿನಲ್ಲಿ ಸ್ವಯಂಭುವಾದ ಯಾವ ವಸ್ತುವೂ ಇಲ್ಲ. ನಾವು ಜಗತ್ತಿನಲ್ಲಿ ನೋಡುತ್ತಿರುವುದೆಲ್ಲವೂ ಪ್ರಕೃತಿಯ ಅದ್ಭುತಗಳಾಗಿದ್ದು, ಅವುಗಳಿಗೊಬ್ಬ ಸೃಷ್ಟಿಕರ್ತನಾಗಲೀ, ನಿಯಂತ್ರಕನಾಗಲೀ ಇಲ್ಲವೆಂದು ವಾದಿಸುವ ಬುದ್ಧಿಜೀವಿಗಳೆಂದು ಕರೆಸಿಕೊಳ್ಳುತ್ತಿರುವ ಕೆಲವರಿರುವರಾದರೂ ಅವರ ವಾದ ನಿರರ್ಥಕವಾಗಿದೆ.

ನಮ್ಮ ನಡುವೆ ಓಡುತ್ತಿರುವ ವಾಹನವೊಂದು ಚಾಲಕನಿಲ್ಲದೆ ಹತ್ತು ಕಿ.ಮೀ. ದೂರ ತನ್ನಷ್ಟಕ್ಕೆ ಓಡಿತೆಂದು ಹೇಳಿದರೆ ಈ ಮಂದಿ, ಹಾಗೆ ಹೇಳಿದವನನ್ನು ಮೂರ್ಖ ಅಥವಾ ಬುದ್ಧಿಭ್ರಮಣೆ ಸಂಭವಿಸಿದವನೆಂದು ಹೇಳುತ್ತಾರೆ. ಆದರೆ ಇವರೊಂದಿಗೆ ಈ ತನಕ ಒಂದಿಷ್ಟು ತಾಳ ತಪ್ಪದೆ ಗಡಿಯಾರದ ಮುಳ್ಳಿನಂತೆ ಆಕಾಶದಲ್ಲಿ ಚಲಿಸುತ್ತಿರುವ ಸೂರ್ಯ, ಚಂದ್ರ, ನಕ್ಷತ್ರ, ಗ್ರಹಗಳು ಮತ್ತು ಭೂಮಿ ಇತ್ಯಾದಿಗಳನ್ನು ಸೃಷ್ಟಿಸಿದವನೊಬ್ಬನಿದ್ದಾನೆ, ನಾವು ಅವನನ್ನು ಮಾತ್ರ ಆರಾಧಿಸಬೇಕೆಂದು ಹೇಳಿದರೆ ಅದನ್ನು ನಿಷೇಧಿಸುತ್ತಾರೆ. ಇಷ್ಟರತನಕ ಆಕಾಶದ ವಿಸ್ತೀರ್ಣವನ್ನೇ ಅಂದಾಜಿಸಲು ಸಾಧ್ಯವಾಗದ ಈ ಮಂದಿ ಶಿಸ್ತುಬದ್ಧವಾಗಿ ವರ್ತಿಸುತ್ತಿರುವ ಈ ವಿಶ್ವಕ್ಕೆ ಸೃಷ್ಟಿಕರ್ತನಿಲ್ಲವೆಂದು ಹೇಳುವುದಕ್ಕಿಂತ ಮಿಗಿಲಾದ ಮೂರ್ಖತನ ಇನ್ನೇನಿರಬಹುದು?



ಜಗತ್ತಿನಲ್ಲಿರುವ ಪ್ರತಿಯೊಂದು ವಸ್ತುವನ್ನು ಪರಿಶೋಧಿಸಿದಾಗಲೂ ಅದರಲ್ಲಿ ಅಲ್ಲಾಹನ ಅಸ್ತಿತ್ವವು ಪ್ರತಿಫಲಿಸುತ್ತಿರುವುದನ್ನು ನಾವು ನೋಡಬಹುದಾಗಿದೆ. ಅಲ್ಲಾಹನನ್ನು ಅಂಗೀಕರಿಸಿ ಅವನನ್ನು ಮಾತ್ರ ಆರಾಧಿಸುವುದಕ್ಕಾಗಿಯೇ ಅವನು ಸಕಲ ಸೃಷ್ಟಿಗಳನ್ನು ಒಂದು ದೃಷ್ಟಾಂತವಾಗಿ ಸೃಷ್ಟಿಸಿದ್ದಾನೆ. ಆ ದೃಷ್ಟಾಂತಗಳನ್ನು ಅರಿತುಕೊಂಡು, ಅದರಲ್ಲಿ ಅಡಕವಾಗಿರುವ ಮಹತ್ತಾದ ಸಾಮರ್ಥ್ಯವನ್ನು ಮನದಟ್ಟು ಮಾಡುವ ಮೂಲಕ ಸೃಷ್ಟಿಕರ್ತನಿಗೆ ಕೃತಜ್ಞತೆ ಸೂಚಿಸುವವನೇ ವಾಸ್ತವದಲ್ಲಿ ನಿಜವಾದ ಬುದ್ಧಿಜೀವಿಯಾಗಿದ್ದಾನೆ.

"ಅವರಿಗೊಂದು ದೃಷ್ಟಾಂತವಾಗಿದೆ ನಿರ್ಜೀವ ಭೂಮಿ. ಅದನ್ನು ನಾವು ಜೀವಂತಗೊಳಿಸಿದೆವು ಮತ್ತು ಅದರಿಂದ ಧಾನ್ಯವನ್ನು ಉತ್ಪಾದಿಸಿದೆವು. ಹಾಗೆ ಅದರಿಂದ ಅವರು ತಿನ್ನುತ್ತಾರೆ. ಅದರಲ್ಲಿ ನಾವು ಖರ್ಜೂರದ ಮತ್ತು ದ್ರಾಕ್ಷೆಯ ಉದ್ಯಾನಗಳನ್ನು ಮಾಡಿದೆವು ಮತ್ತು ಹೊನಲುಗಳನ್ನೂ ಅದರಲ್ಲಿ ಹರಿಸಿದೆವು. ಅವುಗಳ ಫಲಗಳಿಂದ ಅವರು ತಿನ್ನಲೆಂದು. ಅವರ ಕೈಗಳೇನೂ ಅವನ್ನು ಮಾಡಲಿಲ್ಲ. (ಹಾಗಾದರೆ) ಇವರು ಕೃತಜ್ಞತೆ ಪ್ರಕಟಿಸುವುದಿಲ್ಲವೇ? (ಕುರ್‌ಆನ್ 33, 35)

ಆಕಾಶ ಭೂಮಿಗಳ ಸೃಷ್ಟಿ ಹಾಗೂ ಹಗಲು ರಾತ್ರಿಗಳ ಬದಲಾವಣೆಯಲ್ಲಿ ಚಿಂತಿಸುವವರಿಗೆ ನಿದರ್ಶನವಿದೆಯೆಂದು ಅಲ್ಲಾಹನು ಹೇಳುತ್ತಾನೆ. ಕಾರಣವೇನೆಂದರೆ, ಆಲೋಚಿಸುವವರಿಗೆ ಮಾತ್ರ ಸೃಷ್ಟಿಕರ್ತ ಮತ್ತು ಅವನ ಸಾಮರ್ಥ್ಯವನ್ನು ತಿಳಿಯಲು ಸಾಧ್ಯ. ಸೃಷ್ಟಿಕರ್ತನನ್ನು ಸರಿಯಾಗಿ ಅರಿತ ವ್ಯಕ್ತಿಗೆ ಮಾತ್ರವೇ ಯಥಾವಿಧಿ ಅವನನ್ನು ಅನುಸರಿಸಿ ಜೀವಿಸಲು ಸಾಧ್ಯ. ಈ ಪ್ರಪಂಚದಲ್ಲಿರುವ ಮರ, ಬೆಟ್ಟ, ಪರ್ವತ... ಮುಂತಾದುವುಗಳೆಲ್ಲವೂ ಒಂದು ಮತ್ತೊಂದರ ಅಗತ್ಯ ಮತ್ತು ಉಪಯೋಗಕ್ಕಾಗಿ ಸೃಷ್ಟಿಸಲ್ಪಟ್ಟಿದೆ. ಯಾವುದನ್ನೂ ಅವನು ನಿರರ್ಥಕ ಅಥವಾ ಅನಾವಶ್ಯಕವಾಗಿ ಸೃಷ್ಟಿಸಿಲ್ಲ. ಮನುಷ್ಯನಿಗೆ ಅವಶ್ಯಕವಾದ ಆಕ್ಸಿಜನನ್ನು ಸಸ್ಯಗಳು ಹೊರ ಬಿಡುತ್ತಿರುವಾಗ, ಮನುಷ್ಯನು ಸಸ್ಯಗಳಿಗೆ ಅಗತ್ಯವಿರುವ ಕಾರ್ಬನ್ ಡೈಯಾಕ್ಸೈಡನ್ನು ಹೊರ ಬಿಡುತ್ತಿದ್ದಾನೆ. ಇದು ಮನುಷ್ಯರು ಮತ್ತು ಸಸ್ಯಗಳ ಪ್ರಜ್ಞಾಪೂರ್ವಕವಾದ ಕೆಲಸವಲ್ಲ. ಅಲ್ಲಾಹನ ವ್ಯವಸ್ಥೆಯಾಗಿದೆ. ನಾವು ಏಕದೇವ ವಿಶ್ವಾಸಿಗಳಾಗಲು ಅವನು ನಮ್ಮ ದೇಹದಲ್ಲಿ ಸೃಷ್ಟಿಸಿರುವ ನಿದರ್ಶನಗಳೇ ಧಾರಾಳ ಸಾಕು. ಕೈ, ಕಾಲು, ಕಿವಿ, ಮೂಗು, ಕಣ್ಣು ಎಲ್ಲವೂ ಒಂದು ಸುಂದರ ಸೃಷ್ಟಿಯಾಗಿದೆ. ಮನುಷ್ಯ ಒಂದು ಸುಂದರ ಸೃಷ್ಟಿಯಾಗಿದ್ದಾನೆ. ಅಲ್ಲಾಹನು ಹೇಳುವುದನ್ನು ನೋಡಿರಿ: "ನಿಶ್ಚಯವಾಗಿಯೂ ಮನುಷ್ಯನನ್ನು ನಾವು ಅತ್ಯಂತ ಉತ್ತಮ ವ್ಯವಸ್ಥೆಯೊಂದಿಗೆ ಸೃಷ್ಟಿಸಿರುತ್ತೇವೆ." (ಕುರ್‌ಆನ್ 95:4). ಮನುಷ್ಯನ ಪ್ರತಿಯೊಂದು ಅವಯವಗಳನ್ನು ಸ್ಪಷ್ಟವಾಗಿ ಮತ್ತು ಶಿಸ್ತುಬದ್ಧವಾಗಿ ಸೃಷ್ಟಿಸಿದ ಅಲ್ಲಾಹನು ಅವುಗಳನ್ನು ಇಡಬೇಕಾದ ಜಾಗದಲ್ಲಿಟ್ಟು ಒಂದು ಕಾಲದಲ್ಲಿ ನಾವು ಏನಾಗಿದ್ದೆವು? ಏನೂ ಆಗಿರಲಿಲ್ಲವೆಂದು ಖಚಿತವಾಗಿ ಹೇಳಬಹುದಾಗಿದೆ. ಆದುದರಿಂದ ನಮ್ಮನ್ನು ಇಂದಿನ ರೂಪಕ್ಕೆ ಮಾರ್ಪಡಿಸಿದವನು ಎಷ್ಟೊಂದು ಮಹಾನನು ಮತ್ತು ಪ್ರಬಲನೆಂದು ನಾವು ಆಲೋಚಿಸಬೇಕಾಗಿದೆ.

ಮೂಲಭೂತವಾಗಿ ಮನುಷ್ಯನು ಪುರುಷನ ಬೆನ್ನು ಮೂಳೆಗಳ ನಡುವಿನಿಂದ ಸ್ರವಿಸುತ್ತಿರುವ ಒಂದು ದ್ರಾವಕವಾಗಿದ್ದಾನೆ. ನಂತರ ಅದರಲ್ಲಿ ಹಲವಾರು ಬದಲಾವಣೆಗಳುಂಟಾದುವು. ಅವನು ರಕ್ತ, ಮಾಂಸ, ಎಲುಬು, ಚರ್ಮವಿರುವ ಓರ್ವ ಪೂರ್ಣಜೀವಿಯಾಗಿ ಮಾರ್ಪಟ್ಟನು. ಇದರ ಹಿನ್ನೆಲೆಯಲ್ಲಿ ಕಾರ್ಯ ವೆಸಗುವವರಾರು? ಆಕಸ್ಮಿಕ ಪ್ರಕ್ರಿಯೆಯೇ? ಅಥವಾ (6ನೇ ಪುಟಕ್ಕೆ)

## ಕುರ್‌ಆನ್ ಉಪಮಿಸಿದ ನಾಲ್ಕು ಮಹಿಳೆಯರು

ಕುರ್‌ಆನ್ ಇಬ್ಬರು ನರಕವಾಸಿಗಳಾದ ಮಹಿಳೆಯರನ್ನು ಮತ್ತು ಇಬ್ಬರು ಸ್ವರ್ಗವಾಸಿಗಳಾದ ಮಹಿಳೆಯರನ್ನು ಪರಿಚಯಿಸುತ್ತದೆ. ನರಕವಾಸಿಗಳಾದ ಇಬ್ಬರು ಸಾಮಾನ್ಯರ ಪತ್ನಿಯರಲ್ಲ, ಅಲ್ಲಾಹನು ಅನುಗ್ರಹಿಸಿದ ಇಬ್ಬರು ಪ್ರವಾದಿಗಳ ಪತ್ನಿಯರು ಹೌದು. 950 ವರ್ಷಗಳಷ್ಟು ಕಾಲ ಎಲ್ಲಾ ಪೀಡನೆಗಳನ್ನು ಸಹಿಸಿ ಅಲ್ಲಾಹನ ಧರ್ಮದ ಕಡೆಗೆ ಆಹ್ವಾನಿಸಿದ ಮಹಾನ್ ಪ್ರವಾದಿ ನೂಹ್(ಅ) ರವರ ಪತ್ನಿ ಹಾಗೂ ಇನ್ನೊಬ್ಬಳು ಲೂತ್(ಅ) ರವರ ಪತ್ನಿ. ಇವರು ಅನೈತಿಕ ಕೆಲಸದಲ್ಲಿ ಏರ್ಪಟ್ಟು ನರಕವಾಸಿಗಳಾದದ್ದಲ್ಲ, ಬದಲಾಗಿ ಅವರು ಸತ್ಯವಿಶ್ವಾಸಿನಿಗಳಾಗಿರಲಿಲ್ಲ. ಸತ್ಯವಿಶ್ವಾಸದ ಹಾದಿಯಲ್ಲಿ ಅವರು ತಮ್ಮ ಪತಿಯೊಂದಿಗೆ ನೆರವಾಗಲಿಲ್ಲ. ಆ ಮಹಿಳೆಯರ ಕುರಿತು ಕುರ್‌ಆನಿನ ಪ್ರಸ್ತಾವನೆ ಹೀಗಿದೆ:

ضَرَبَ اللَّهُ مَثَلًا لِّلَّذِينَ كَفَرُوا امْرَأَتَ نُوحٍ وَامْرَأَتَ لُوطٍ ۖ كَانَتَا تَحْتَ عَبْدَيْنِ مِنْ عِبَادِنَا صَالِحَيْنِ فَخَانَتَاهُمَا فَلَمْ يُغْنِيَا عَنْهُمَا مِنَ اللَّهِ شَيْئًا وَقِيلَ ادْخُلَا النَّارَ مَعَ الدَّاخِلِينَ ﴿١٠﴾

ಸತ್ಯನಿಷೇಧಿಗಳಿಗೆ ಒಂದು ಉದಾಹರಣೆಯಾಗಿ ಅಲ್ಲಾಹು ನೂಹ್‌ರ ಪತ್ನಿಯನ್ನೂ ಲೂತ್‌ರ ಪತ್ನಿಯನ್ನೂ ಎತ್ತಿತೋರಿಸುತ್ತಾನೆ. ಇಬ್ಬರು ಸ್ತ್ರೀಯರು ನಮ್ಮ ದಾಸರ ಪೈಕಿ ಸಜ್ಜನರಾದ ಇಬ್ಬರು ದಾಸರ ಅಧೀನದಲ್ಲಿದ್ದರು. ಆದರೆ ಇಬ್ಬರೂ ಅವರನ್ನು (ಪತಿಯರನ್ನು) ವಂಚಿಸಿದರು. ಆದುದರಿಂದ ಅವರಿಬ್ಬರು (ಪತಿಯಂದಿರು)



ಅವರಿಗೆ (ಪತ್ನಿಯರಿಗೆ) ಅಲ್ಲಾಹನ ಕಡೆಯಿಂದ (ಎರಗುವ) ಏನನ್ನೂ ನಿವಾರಿಸಿಕೊಡಲಿಲ್ಲ. ಮತ್ತು (ಅವರೊಡನೆ) "ನರಕಕ್ಕೆ ಪ್ರವೇಶಿಸುವವರ ಜೊತೆಗೆ ನೀವಿಬ್ಬರೂ ಪ್ರವೇಶಿಸಿರಿ" ಎಂದು ಹೇಳಲಾಯಿತು. (66x10)

ಆ ಇಬ್ಬರು ಮಹಾನ್ ಪ್ರವಾದಿಗಳ ಪತ್ನಿಯರಾಗಿಯೂ ಅವರ ದಾಂಪತ್ಯ ಸಂಬಂಧವು ಅವರಿಗೆ ಅಲ್ಲಾಹನ ಶಿಕ್ಷೆಯಿಂದ ರಕ್ಷಣೆ ಹೊಂದಲು ಸಹಕಾರಿಯಾಗಲಿಲ್ಲ.

(10ನೇ ಪುಟಕ್ಕೆ)



بسم الله الرحمن الرحيم

## ಸ್ವಚ್ಛ ಸರಕಾರದ ಸಂಸ್ಥಾಪನೆಗಾಗಿ ಮತ ನೀಡಿ

### ಸೌತ್ ಕರ್ನಾಟಕ ಸಲಫಿ ಮೂವ್‌ಮೆಂಟ್ ಮನವಿ

ಸರ್ವಧರ್ಮಗಳ ಸಂಗಮ ಭೂಮಿಯಾದ ಭಾರತವನ್ನು ಯಾರು ಆಳಬೇಕೆಂದು ಭಾರತೀಯರು ನಿರ್ಧರಿಸುವ ಮಹಾ ಚುನಾವಣೆ ಬಂದಿದೆ. ಸ್ವಾತಂತ್ರ್ಯೋತ್ತರ ಭಾರತದ ಪ್ರಥಮ ಸರಕಾರದಲ್ಲಿ, ಅಲ್ಲಿಕ ನಡೆಸಿದಂತಹ ಬುದ್ಧಿಜೀವಿಗಳೂ ರಾಷ್ಟ್ರೀಯ ಚಿಂತಕರೂ ಜಾತ್ಯಾತೀತ ಮನೋಭಾವದವರೂ ಆದ ಮಾದರೀ ನಾಯಕರು ಇಂದು ನಮ್ಮ ದೇಶದ ರಾಜಕೀಯ ರಂಗದಲ್ಲಿ ವಿರಳವಾಗುತ್ತಿದ್ದಾರೆ. ಕ್ರಿಮಿನಲ್‌ಗಳು, ಅಕ್ರಮ ಸಂಪಾದನೆ ಮಾಡುವವರು, ಸಿನಿಮಾ ನಟ-ನಟಿಯರು ಮತ್ತು ಕ್ರೀಡಾ ಪಟುಗಳು ರಾಜಕೀಯರಂಗ ಪ್ರವೇಶಿಸಿ, ಶಾಸಕ, ಸಂಸದ, ಸಚಿವರಾಗಿ ವಿರಾಜಿಸತೊಡಗಿದ್ದಾರೆ. ಇನ್ನೊಂದೆಡೆ ಜಾತಿ-ಧರ್ಮಗಳ ಹೆಸರಲ್ಲಿ ಭಾರತೀಯರ ಮಧ್ಯೆ ಬಿರುಕನ್ನು ಸೃಷ್ಟಿಸಿ ಮತೀಯ ಸಾಮ್ರಾಜ್ಯ ಕಟ್ಟುವ ಹವಣಿಕೆಯಲ್ಲಿ ಕೋಮುವಾದಿ ಶಕ್ತಿಗಳು ವಿಧ್ವಂಸಕ ಕೃತ್ಯಗಳನ್ನು ಬಳಕೆಯಲ್ಲಿಸುತ್ತಿವೆ. ಮೋಸ, ವಂಚನೆ, ಅಧಿಕಾರ ದುರುಪಯೋಗ, ಭ್ರಷ್ಟಾಚಾರಗಳ ಮೂಲಕ ದೇಶವನ್ನೇ ದೋಚಿ ತಲೆಮಾರುಗಳ ವರೆಗೆ ತಿಂದು ಮುಗಿಯದಷ್ಟು ಅಗಾಧ ಸಂಪತ್ತನ್ನು ಕೂಡಿಟ್ಟಿರುವ ಭ್ರಷ್ಟ ರಾಜಕಾರಣಿಗಳು ಮತ್ತಷ್ಟು ದೋಚಲಿಕ್ಕಾಗಿ ಮತ್ತೆ ಚುನಾವಣೆಗೆ ನಿಂತಿದ್ದಾರೆ. ಈ ರೀತಿ ಭ್ರಷ್ಟರು, ದುಷ್ಟರು, ಸಂಸ್ಕೃತಿಹೀನರೆಲ್ಲಾ ಸೇರಿ ದೇಶದ ಉನ್ನತ ಸಂಸ್ಕೃತಿಯನ್ನು ಹರಿದು ತಿನ್ನಲು ಕಾತರದಿಂದಿರುವ ಈ ಸಂದರ್ಭದಲ್ಲಿ ಈ ದೇಶದ ಜಾತ್ಯಾತೀತ ಸಂಸ್ಕೃತಿಯನ್ನು ಮತ್ತು ದೇಶದ ಅತ್ಯುತ್ಕೃಷ್ಟವಾದ ಸಂವಿಧಾನದ ಆಶಯವನ್ನು ಕಾಪಾಡುವ ರಾಷ್ಟ್ರೀಯ ಹಿತಾಸಕ್ತಿಯುಳ್ಳ ಪ್ರಾಮಾಣಿಕ ಸರಕಾರವೊಂದನ್ನು ಕೇಂದ್ರದಲ್ಲಿ ಅಧಿಕಾರ ಕ್ಕೇರಿಸಲು ಭಾರತೀಯರು ಸನ್ನದ್ಧರಾಗಬೇಕಾದ ಅಗತ್ಯವಿದೆ.

ದೇಶದಲ್ಲಿ ಮತೀಯ ಸಂಘರ್ಷಗಳು, ಮಹಿಳೆಯರು ಮತ್ತು ಮಕ್ಕಳ ಮೇಲೆ ಅತ್ಯಾಚಾರ, ಅಲ್ಪ ಸಂಖ್ಯಾತರು ಮತ್ತು ದಲಿತರ ಮೇಲೆ ದೌರ್ಜನ್ಯಗಳು ಅವ್ಯಾಹತವಾಗಿ ನಡೆಯುತ್ತಿವೆ. ಕೊಲೆ, ಸುಲಿಗೆ, ಅನ್ಯಾಯ, ಅಕ್ರಮಗಳು ದಿನಂಪ್ರತಿ ಹೆಚ್ಚುತ್ತಿವೆ. ಎಲ್ಲಾ ರೀತಿಯ ಅಪರಾಧಿ ಕೃತ್ಯಗಳಿಗೆ ಪ್ರೇರಕ ಶಕ್ತಿಯಾಗಿರುವ ಮದ್ಯಪಾನ ಜನ ಜೀವನದ ಅವಿಭಾಜ್ಯ ಅಂಗವಾಗಿ ಮಾರ್ಪಟ್ಟಿದೆ. ಕ್ರಿಮಿನಲ್‌ಗಳು ಮತ್ತು ದೇಶದ್ರೋಹಿಗಳು ಭ್ರಷ್ಟರು ಅಧಿಕಾರಕ್ಕೇರುತ್ತಿದ್ದು ದೇಶದ ಸಂಸ್ಕೃತಿ ನಾಶವಾಗುತ್ತಿದೆ. ಬಡವರ, ದುರ್ಬಲರ ಬದುಕು ಮತ್ತಷ್ಟು ದುಸ್ತರವಾಗುತ್ತಿದೆ.

ಇದೀಗ ಭ್ರಷ್ಟರನ್ನು ದುಷ್ಟರನ್ನು ತೊಲಗಿಸಿ ಕೋಮುವಾದ, ಭ್ರಷ್ಟಾಚಾರ, ದುರಾಚಾರ, ದುಷ್ಟತನಗಳಿಲ್ಲದ, ಎಲ್ಲಾ ಜನಾಂಗಗಳ ಹಿತಾಸಕ್ತಿಯನ್ನು ಕಾಪಾಡುವ, ಜನರ ಸಾಂವಿಧಾನಿಕ ಹಕ್ಕುಗಳನ್ನು ರಕ್ಷಿಸುವ ಮತ್ತು ನ್ಯಾಯಪಾಲನೆ ಮಾಡುವ ನಿಸ್ವಾರ್ಥ ಸೇವಾ ಮನೋಭಾವದ ಶುದ್ಧ ಚಾರಿತ್ರ್ಯದ ಜಾತ್ಯಾತೀತ ಅಭ್ಯರ್ಥಿಗಳಿಗೆ ಮತ ನೀಡಿ ಸ್ವಚ್ಛ ಸರಕಾರವೊಂದರ ಸಂಸ್ಥಾಪನೆ ಮಾಡಲು ಕಾಲ ಒದಗಿ ಬಂದಿದ್ದು, ದೇಶದ ಪ್ರಜ್ಞಾವಂತ ಮತದಾರರು ದೇಶದ ಹಿತಾಸಕ್ತಿಯನ್ನು ಗಮನದಲ್ಲಿರಿಸಿ ಪ್ರಸಕ್ತ ಚುನಾವಣೆಯಲ್ಲಿ ಐತಿಹಾಸಿಕ ತೀರ್ಪೊಂದನ್ನು ನೀಡಲು ಸನ್ನದ್ಧರಾಗಬೇಕೆಂದು

# ರಹ್ಮಾನನ ಆಜ್ಞೆಯನ್ನು ಉಲ್ಲಂಘಿಸದವರು

ಮನುಷ್ಯನಿಗೆ ತನ್ನ ಕಣ್ಣುಗಳಿಂದ ನೋಡಲು ಅಸಾಧ್ಯವಾದ ಅದೆಷ್ಟೋ ಸಂಗತಿಗಳು ಈ ಭೂಮಿಯಲ್ಲಿವೆ. ಪ್ರಸ್ತುತ ವಸ್ತುಗಳು ಮತ್ತು ಅದ್ಭುತಗಳ ಕುರಿತು ಸಂಶೋಧನೆಯಿಂದ ಮಾತ್ರ ತಿಳಿಯಲು ಸಾಧ್ಯ. ಸಂಶೋಧನೆಯಿಂದ ಗ್ರಾಹ್ಯವಲ್ಲದ ಅದ್ಭುತಗಳು ಮತ್ತಿತರ ವಸ್ತುಗಳಲ್ಲುಂಟು ಮಾಡುವ ಪ್ರಕ್ರಿಯೆಗಳನ್ನು ಗಮನಿಸಿ ಅದನ್ನು ಪ್ರಯೋಗಕ್ಕೆ ಒಳಪಡಿಸಲಾಗುತ್ತದೆ. ಬೆಳಕಿಗಿಂತ ವೇಗದ ವಸ್ತುಗಳನ್ನು ನಮಗೆ ಯಾವತ್ತೂ ನೋಡಲು ಅಥವಾ ಅನುಭವಿಸಲು ಅಸಾಧ್ಯವೆಂದು ಈಗಾಗಲೇ ಸೈದ್ಧಾಂತಿಕವಾಗಿ ದೃಢೀಕರಿಸಲ್ಪಟ್ಟಿದೆ. ಆದರೆ ನಮ್ಮ ಪ್ರಯೋಗ - ಸಂಶೋಧನೆಗೆ ಒಳಪಡಿಸಲಾಗದ ಹಲವಾರು ವಿಷಯಗಳೂ ಅಸ್ತಿತ್ವದಲ್ಲಿವೆ.

ಮಲಕ್‌ಗಳೆಂದರೆ (ದೇವಚರರು) ಮನುಷ್ಯನು ತನ್ನ ಸಾಮಾನ್ಯ ಇಂದ್ರಿಯ ಜ್ಞಾನದಿಂದ ಅರಿಯಲು ಅಥವಾ ಅನುಭವಿಸಲು ಅಸಾಧ್ಯವಾದ ದೇವನ ಸೃಷ್ಟಿಗಳಾಗಿದ್ದಾರೆ. ಅವರು ಪ್ರಕಾಶದಿಂದ ಸೃಷ್ಟಿಸಲ್ಪಟ್ಟವರು. ಪ್ರವಾದಿ(ಸ) ಹೇಳುತ್ತಾರೆ: "ಮಲಕ್‌ಗಳು ಪ್ರಕಾಶದಿಂದಲೂ ಜಿನ್ನ್‌ಗಳು ಅಗ್ನಿಯಿಂದಲೂ ಸೃಷ್ಟಿಸಲ್ಪಟ್ಟಿದ್ದಾರೆ" (ಸಹೀಹ್ ಮುಸ್ಲಿಮ್). ಇವರು ಇಂದ್ರಿಯ ಜ್ಞಾನಕ್ಕೆ ಅತೀತರಾದ ಸೃಷ್ಟಿಗಳಾದ್ದರಿಂದ ಈ ಕುರಿತು ತಿಳಿಯಲು ದೈವಿಕ ಉಪದೇಶಗಳನ್ನು ಆಶ್ರಯಿಸುವುದು ಅನಿವಾರ್ಯವಾಗಿದೆ. ಮಲಕ್‌ಗಳ ದೌತ್ಯ ಹಾಗೂ ಅವರ ಅಸ್ತಿತ್ವದ ಬಗ್ಗೆ ಒಂದು ಸಾಧಾರಣ ಚಿತ್ರಣವನ್ನು ಕುರ್‌ಆನ್ ನಮಗೆ ನೀಡುತ್ತದೆ. ಮಲಕ್‌ಗಳ ಅಸ್ತಿತ್ವ ಹಾಗೂ ಅವರ ಕುರಿತು ಕುರ್‌ಆನಿನಲ್ಲಿ ಪ್ರತಿಪಾದಿಸಲ್ಪಟ್ಟ ವಿಷಯಗಳ ಮೇಲೆ ದೃಢ ವಿಶ್ವಾಸವನ್ನಿಟ್ಟುಕೊಳ್ಳುವುದು ಸತ್ಯವಿಶ್ವಾಸದ ಭಾಗವಾಗಿದೆ.

ಮಲಕ್‌ಗಳ ಪ್ರಕೃತಿ ಮನುಷ್ಯರಿಗಿಂತ ತೀರಾ ಭಿನ್ನವಾಗಿದೆ. ಅವರಿಗೆ ಅಲ್ಲಾಹನನ್ನು ಧಿಕ್ಕರಿಸಲು ಸಾಧ್ಯವಿಲ್ಲ. ಅನುಸರಣೆ ಅವರ ಪ್ರಕೃತಿದತ್ತ ವಿಶೇಷತೆಯಾಗಿದೆಯೆಂದು ಹೇಳಬಹುದಾಗಿದೆ. ಅಹಂಕಾರ ಅಥವಾ ಅವಿಧೇಯತೆ ಅವರಿಂದ ಸಂಭವಿಸುವುದಿಲ್ಲ. ಕುರ್‌ಆನ್ ಹೇಳುವುದನ್ನು ನೋಡಿರಿ. "ಭೂಮ್ಯಾಕಾಶಗಳಲ್ಲಿನ ಜೀವಜಾಲಗಳು ಸರ್ವವೂ ಅಲ್ಲಾಹನಿಗೆ ಸಾಷ್ಟಾಂಗವೆರಗುತ್ತಿರುವುದಲ್ಲದೆ, ಮಲಕ್‌ಗಳು ಕೂಡಾ (ಸಾಷ್ಟಾಂಗವೆರಗುತ್ತಾರೆ). ಅವರು ಅಹಂಭಾವ ತೋರಿಸುವುದಿಲ್ಲ. ಅವರು ತಮ್ಮ ಪ್ರಭುವನ್ನು ಭಯಪಡುತ್ತಾರೆ. ಮಾತ್ರವಲ್ಲ ತಮಗೆ ಆಜ್ಞಾಪಿಸಲ್ಪಟ್ಟಂತೆಯೇ ಅವರು ಕಾರ್ಯವೆಸಗುತ್ತಾರೆ." (ಕುರ್‌ಆನ್ 16:49, 50)

ಪ್ರವಾದಿಗಳಿಗೆ ದೈವಿಕ ಉಪದೇಶವನ್ನು ತಲುಪಿಸುವುದು ಮಲಕ್‌ಗಳ ಪ್ರಮುಖ ದೌತ್ಯವಾಗಿದೆ. ಅಲ್ಲಾಹನು ತನ್ನ ಸಂದೇಶವಾಹಕರಿಗೆ ಮಲಕ್‌ಗಳ ಮೂಲಕ ಸಂದೇಶವನ್ನು ತಲುಪಿಸುತ್ತಾನೆಂದು ಕುರ್‌ಆನ್ ಹೇಳುತ್ತದೆ. "ತನ್ನ ದಾಸರಲ್ಲಿ ತಾನಿಚ್ಛಿಸಿದವರಿಗೆ ದಿವ್ಯ ಸಂದೇಶವನ್ನು ತನ್ನ ಆಜ್ಞೆಯಿಂದ, ಮಲಕ್‌ಗಳ ಮೂಲಕ ಅವತೀರ್ಣಗೊಳಿಸುತ್ತಾನೆ. "ನನ್ನ ಹೊರತು ನಿಮಗೆ ಇನ್ನಾವ ಆರಾಧ್ಯರೂ ಇಲ್ಲ. ಆದ್ದರಿಂದ ನನ್ನನ್ನೇ ಭಯಪಡಿರಿ ಎಂದು ಅವರಿಗೆ ಮುನ್ನೆಚ್ಚರಿಕೆ ನೀಡಿರೆಂದು. (ಅವರನ್ನು ಕಳುಹಿಸಲಾಗುತ್ತದೆ) (ಕುರ್‌ಆನ್ 16-2)

ಮಲಕ್‌ಗಳ ಪೈಕಿ ಜಿಬ್ರೀಲ್ ಪ್ರಮುಖ ದೌತ್ಯ ನಿರ್ವಾಹಕರಾಗಿದ್ದಾರೆ. ಅಂತ್ಯಪ್ರವಾದಿ ಮುಹಮ್ಮದ್ (ಸ)ರವರಿಗೂ ಇವರ ಮೂಲಕವೇ ಕುರ್‌ಆನ್ ಅವತೀರ್ಣಗೊಳಿಸಲ್ಪಟ್ಟಿತು. ಜಿಬ್ರೀಲ್(ಅ) ಎಂಬ ದೇವಚರರು ವಿಶ್ವಾಸಾರ್ಹ ಆತ್ಮ (ರೂಹುಲ್ ಅಮೀನ್), ಪರಿಶುದ್ಧಾತ್ಮ (ರೂಹುಲ್ ಖುದ್ಸ್) ಮುಂತಾದ ಹೆಸರುಗಳಿಂದಲೂ ಅಭಿಸಂಬೋಧಿಸಲ್ಪಟ್ಟಿದ್ದಾರೆ. "ನಿಶ್ಚಯವಾಗಿಯೂ ಇದು (ಕುರ್‌ಆನ್) ಸರ್ವ ಲೋಕಗಳ ಪ್ರಭುವಿನಿಂದ ಅವತೀರ್ಣಗೊಳಿಸಲ್ಪಟ್ಟುದಾಗಿದೆ. ಓರ್ವ ವಿಶ್ವಾಸಾರ್ಹ ಆತ್ಮವು ಇದನ್ನು ನಿಮ್ಮ ಹೃದಯದಲ್ಲಿ ತಂದಿರಿಸಿದೆ. ನೀವು (ಜನರಿಗೆ) ಮುನ್ನೆಚ್ಚರಿಕೆ ಕೊಡುವವರಾಗಬೇಕೆಂದು". (ಕುರ್‌ಆನ್ 26: 192-194) "ಹೇಳಿರಿ: ಇದನ್ನು ಪವಿತ್ರಾತ್ಮ ನಿಮ್ಮ ಪ್ರಭುವಿನಿಂದ ಸತ್ಯಪೂರ್ಣವಾಗಿ ಹಂತಹಂತವಾಗಿ ಇಳಿಸಿರುವುದು..." (ಕುರ್‌ಆನ್ 16:102)

ಮನುಷ್ಯರ ಕರ್ಮಗಳನ್ನು ದಾಖಲಿಸಲು ಮಲಕ್‌ಗಳನ್ನು ನಿಯುಕ್ತಗೊಳಿಸಲಾಗಿದೆಯೆಂದು ಕುರ್‌ಆನ್ ಹೇಳುತ್ತದೆ. ಅಂತ್ಯ ದಿನದಂದು ವಿಚಾರಣೆಯ ವೇಳೆ ಮನುಷ್ಯರ ಕರ್ಮ ಪತ್ರಗಳು ಅಲ್ಲಾಹನ ಸನ್ನಿಧಿಯಲ್ಲಿ ಸಮರ್ಪಿಸಲ್ಪಡುತ್ತದೆ. ಈ ಕರ್ಮಪತ್ರವನ್ನು ದಾಖಲಿಸುವ ತಮ್ಮ ಹೊಣೆಯನ್ನು ಮಲಕ್‌ಗಳು ನಿರ್ವಹಿಸುತ್ತಿದ್ದಾರೆ. "ನಿಶ್ಚಯವಾಗಿಯೂ ನಿಮ್ಮ ಮೇಲೆ ಕಾವಲುಗಾರರಿದ್ದಾರೆ. ಬರೆಯುತ್ತಿರುವ ಪ್ರತಿಷ್ಠಾವಂತರು ನೀವು ಮಾಡುತ್ತಿರುವುದನ್ನೆಲ್ಲಾ ಅರಿಯುತ್ತಾರೆ" (ಕುರ್‌ಆನ್ 82:10-12) "ಬಲಪಾರ್ಶ್ವಗಳಲ್ಲಿ ಕುಳಿತು ಇರ್ವರು (ಬರೆದು) ತೆಗೆದುಕೊಳ್ಳುತ್ತಾರೆ. (ಹೀಗೆ) ತೆಗೆದುಕೊಳ್ಳುವಾಗ ಅವನ ಬಾಯಿಂದ ಒಂದು ಮಾತು ಹೊರಡುವುದೇ ತಡ, ಅವನ ಬಳಿ ಕುಳಿತಿರುವವರು ಸಿದ್ಧರಿರುತ್ತಾರೆ. (ಬರೆದಿಡಲು)" (ಕುರ್‌ಆನ್ 50: 17, 18)

ಮನುಷ್ಯರ ಆತ್ಮವನ್ನು ವಶಪಡಿಸಿಕೊಳ್ಳುವವರು ಮಲಕ್‌ಗಳಾಗಿದ್ದಾರೆ. ಅಲ್ಲಾಹನು ನಿಶ್ಚಯಿಸಿದ ಸಮಯ ಸನ್ನಿಹಿತವಾದಾಗ ಪ್ರತಿಯೊಬ್ಬರೂ ಮರಣ ಹೊಂದಲೇ ಬೇಕು. ಆದ್ದರಿಂದ ಯಾರಿಗೂ ಪಾರಾಗಲು ಸಾಧ್ಯವಿಲ್ಲ. ಮರಣಕ್ಕೆ ನಿಶ್ಚಯಿಸಲ್ಪಟ್ಟ ದೇವಚರರು ಆತ್ಮವನ್ನು ವಶಪಡಿಸಿಕೊಳ್ಳುವ ನಿಟ್ಟಿನಲ್ಲಿ ಯಾವುದೇ ದಾಕ್ಷಿಣ್ಯವನ್ನು ತೋರಿಸಲಾರರು. ಕುರ್‌ಆನ್ ಹೇಳುವುದನ್ನು ನೋಡಿರಿ: "ಹೇಳಿರಿ: ನಿಮ್ಮ ಮೇಲೆ ನಿಯುಕ್ತರಾಗಿರುವ ಮೃತ್ಯುವಿನ ಆ ಮಲಕ್, ನಿಮ್ಮನ್ನು ಪೂರ್ಣವಾಗಿ ತನ್ನ ಹಿಡಿತದೊಳಗೆ ತೆಗೆದುಕೊಳ್ಳುತ್ತಾರೆ. ಆ ಮೇಲೆ ನಿಮ್ಮ ಪ್ರಭುವಿನಲ್ಲಿಗೇ ನೀವು ಮರಳಲ್ಪಡುವಿರಿ." (ಕುರ್‌ಆನ್ 32:11)

ಸತ್ಕರ್ಮಿಗಳ ಆತ್ಮವನ್ನು ವಶಪಡಿಸಿಕೊಳ್ಳುವಾಗ ದೇವಚರರು ಶಾಂತಿಯ ಸಂದೇಶದೊಂದಿಗೆ ಆಗಮಿಸುತ್ತಾರೆ. ಅವರು ಸದ್ವೃತ್ತರಿಗೆ ಮುಂದೆ ಪ್ರಾಪ್ತವಾಗಲಿರುವ ಸ್ವರ್ಗೀಯ ಅನುಭೂತಿಯ ಸುವಾರ್ತೆಯೊಂದಿಗೆ ಆಗಮಿಸಿ ಅವರ ಆತ್ಮವನ್ನು ವಶಪಡಿಸಿಕೊಳ್ಳುತ್ತಾರೆ. ಇಂತಹವರಿಗೆ ಮರಣವು ಸ್ವರ್ಗೀಯ ಸುಖಾಡಂಬರಗಳನ್ನು ಅನುಭವಿಸಲಿಕ್ಕಿರುವ ಹೆಬ್ಬಾಗಿಲಾಗಿದೆ. ಈ ಸಜ್ಜನರೊಂದಿಗೆ ಮಲಕ್‌ಗಳು ಹೀಗೆನ್ನುತ್ತಾರೆ: "ನಿಮ್ಮ ಮೇಲೆ ಶಾಂತಿಯಿರಲಿ, ನೀವು ಮಾಡುತ್ತಿದ್ದ ಕಾರ್ಯಗಳ ಕಾರಣಗಳ ಸ್ವರ್ಗವನ್ನು ಪ್ರವೇಶಿಸಿರಿ". (ಕುರ್‌ಆನ್ 16:32)

ಜೀವಿತಾದ್ಯಂತ ಅಲ್ಲಾಹನನ್ನು ನಿಷೇಧಿಸುತ್ತಾ ನಾಸ್ತಿಕರಾದವರು, ಆತನೊಂದಿಗೆ ಇತರರನ್ನು (7ನೇ ಪುಟಕ್ಕೆ)

# ಪತಿಯ ಇಸ್ಲಾಮ್ ಸ್ವೀಕಾರವನ್ನೇ ಮಹ್ರ್ ಪಡೆದ ಸಹಾಬಿ ವನಿತೆ

ಅಬೂ ಆಯಿಶಾ

ಪ್ರವಾದಿ(ಸ)ರ ಸ್ವಭಾವ ಮಹಿಮೆಯನ್ನು ಬೇರೆಲ್ಲರಿಗಿಂತಲೂ ಹತ್ತಿರದಿಂದ ಬಲ್ಲವರು ಅನಸ್(ರ)ರವರಾಗಿದ್ದಾರೆ. ಸೇವಕನನ್ನು ಮನುಷ್ಯನಾಗಿ ಕಾಣಲು ಮತ್ತು ತಪ್ಪುಗಳನ್ನು ಮನ್ನಿಸಲು ಪ್ರವಾದಿ(ಸ)ರಿಗೆ ಸಾಧ್ಯವಾಯಿತು. ಅನಸ್‌ರನ್ನು ಜತೆಯಲಿ ಕೂರಿಸಿ ಒಂದೇ ಪಾತ್ರೆಯಿಂದ ಆಹಾರ ಉಣಿಸಿದರು. ಸ್ವಂತ ಮಗನ ಹಾಗೆ ತಿಳಿದಿರದಂತಹದ್ದನ್ನು ತಿಳಿಸಿ ಕಲಿಸಿಕೊಟ್ಟರು. ಹತ್ತು ವರ್ಷಗಳ ಸೇವಾವಧಿಯಲ್ಲಿ ಒಮ್ಮೆಯೂ ಬೈದು ನಿಂದಿಸಲಿಲ್ಲ, ಶಿಕ್ಷಿಸಲಿಲ್ಲ. ರಸೂಲ್(ಸ)ರ ಅನನ್ಯ ಸ್ವಭಾವದ ಕುರಿತು ಅನಸ್(ರ) ಹೀಗೆ ವರ್ಣಿಸುತ್ತಾರೆ: "ನಾನು ಪ್ರವಾದಿ(ಸ)ರ ಸೇವಕನಾಗಿ ಹತ್ತು ವರ್ಷ ಅವರೊಂದಿಗಿದ್ದೆ. ಇಷ್ಟು ವರ್ಷಗಳಲ್ಲಿ ನನ್ನ ನ್ಯೂನತೆಗಳ ಬಗ್ಗೆ ಒಮ್ಮೆಯೂ ಅತೃಪ್ತಿ ವ್ಯಕ್ತಪಡಿಸಲಿಲ್ಲ. ಮನೆಯವರು ನನ್ನ ಬಗ್ಗೆ ಏನಾದರೂ ದೂರು ಹೇಳಿದರೆ ಅವನನ್ನು ಏಕೆ ಆಕ್ಷೇಪಿಸುತ್ತೀರಿ? ವಿಧಿಯಿಲ್ಲ ಎಂದು ಸಮಾಧಾನಿಸಿದರೆ ಸಾಕು. ಅಲ್ಲಾಹನಿಚ್ಛಿಸಿದ್ದು ನಡೆಯುತ್ತದೆ. ಅವನಿಚ್ಛಿಸದಿದ್ದರೆ ಏನೂ ಆಗುವುದಿಲ್ಲ ಎಂದು ಪ್ರವಾದಿ(ಸ)ರು ಹೇಳುತ್ತಿದ್ದರು."

ಹತ್ತು ವರ್ಷ ಪ್ರಾಯದ ಮಗನನ್ನು ಕರೆದುಕೊಂಡು ಉಮ್ಮು ಸುಲೈಮ್(ರ)ರು ಪ್ರವಾದಿ(ಸ)ರ ಸನ್ನಿಧಿಗೆ ತೆರಳಿದರು. "ಅಲ್ಲಾಹನ ಸಂದೇಶವಾಹಕರೇ, ಇದು ತಮ್ಮ ಸೇವಕನಾದ ಅನಸ್. ಇವನನ್ನು ತಮ್ಮ ಪರಿಚಾರಕನಾಗಿ ನೇಮಿಸಿಕೊಳ್ಳಿರಿ. ಇವನ ಒಳಿತಿಗಾಗಿ ತಾವು ಪ್ರಾರ್ಥಿಸಿರಿ" ಎಂದು ಆಕೆ ಭಿನ್ನವಿಸಿದರು.

ಮಿನ್‌ಹಾನ್‌ನ ಮಗಳಾದ ಮದೀನಾ ನಿವಾಸಿ ಉಮ್ಮು ಸುಲೈಮ್(ರ)ರವರು ದೇವ ಭಯ, ಧರ್ಮಶ್ರದ್ಧೆ, ಸತ್‌ಸ್ವಭಾವ ಮತ್ತು ಸೇವಾ ತತ್ಪರತೆಗಳಿಂದ ಪ್ರವಾದಿ(ಸ)ರ ಮೆಚ್ಚುಗೆಗೆ ಪಾತ್ರರಾದ ಮಾದರೀ ಮಹಿಳೆಯಾಗಿದ್ದರು. ಮಗನನ್ನು ಇಸ್ಲಾಮಿನ ಉತ್ತಮ ಅನುಯಾಯಿಯಾಗಿ ಮಾಡಬೇಕೆಂಬ ಅತಿಯಾದ ಆಕಾಂಕ್ಷೆ. ಸ್ತನಪಾನ ಮುಗಿಯುವುದಕ್ಕಿಂತ ಮೊದಲೇ ಆಕೆ ಮಗನಿಗೆ ಶಹಾದತ್ ಕಲಿಮ ಉಚ್ಚರಿಸಲು ಕಲಿಸಿದ್ದರು.

ಉಮ್ಮು ಸುಲೈಮ್(ರ)ರವರ ಧೀರ ಹಾಗೂ ವಿವೇಕಪೂರ್ಣವಾದ ಕೆಲವು ನಡವಳಿಕೆಗಳು ಅವರಿಗೆ ಪ್ರವಾದಿ(ಸ) ಮತ್ತು ಅನುಚರರ ಬಳಿ ವಿಶೇಷ ಗೌರವಾದರಗಳನ್ನು ಗಳಿಸಿ ಕೊಟ್ಟಿತ್ತು. ಪತಿಯ ಒಪ್ಪಿಗೆಗಾಗಿ ಕಾಯದೆಯೇ ಆಕೆ ಇಸ್ಲಾಮ್ ಸ್ವೀಕರಿಸಿದ್ದರು. ಆಗ ಆಕೆಯ ಪತಿ ಮಾಲಿಕ್ ಊರಲ್ಲಿರಲಿಲ್ಲ. ಊರಿಗೆ ಬಂದು ಸುದ್ದಿ ತಿಳಿದಾಗ ಆತ ಕೇಳುತ್ತಾನೆ: ನೀನು ಪಥಭ್ರಷ್ಟಳಾಗಿದ್ದಿಯೆಂದು ಕೇಳಿದೆ, ಅದು ನಿಜವೇ?" "ನಾನು ಪಥಭ್ರಷ್ಟಳಾಗಿಲ್ಲ, ಅಲ್ಲಾಹನ ಸಂದೇಶವಾಹಕರಲ್ಲಿ ವಿಶ್ವಾಸವಿಟ್ಟಿದ್ದೇನೆ ಅಷ್ಟೇ" ಎಂದು ಆಕೆ ಉತ್ತರಿಸಿದರು. ಲಾಇಲಾಹ ಇಲ್ಲಲ್ಲಾಹ್ ಎಂದು ಉಚ್ಚರಿಸಲು ಹೇಳಿದಾಗ ಮಗು ಹಾಗೆಯೇ ಉಚ್ಚರಿಸಿತು. 'ಅಶ್‌ಹದು ಅನ್ನ ಮುಹಮ್ಮದನ್ ರಸೂಲುಲ್ಲಾಹ್' ಎಂದು ಉಚ್ಚರಿಸಲು ಹೇಳಿದಾಗ ಮಗು ಹಾಗೆಯೇ ಹೇಳಿತು. ಇದನ್ನು ಕೇಳಿದಾಗ ಪತಿ ಮಾಲಿಕ್‌ಗೆ ಕೋಪ ತಡೆಯದಾಯಿತು. "ನೀನು ನನ್ನ ಮಗನನ್ನು ಹಾಳು ಮಾಡಬೇಡ" ಎಂದು ಪತ್ನಿಗೆ ಛೀಮಾರಿ ಹಾಕಿದ ಮಾಲಿಕ್ ಕೋಪೋದ್ರಿಕ್ತನಾಗಿ ಮನೆಯಿಂದ ಹೊರ ಹೋಗುತ್ತಾನೆ. ದಾರಿ ಮಧ್ಯೆ ತನ್ನ ಶತ್ರುವೊಬ್ಬನೊಂದಿಗೆ ನಡೆದ ಸಂಘರ್ಷದಲ್ಲಿ ಮಾಲಿಕ್ ಕೊಲೆಗೀಡಾದ. ಮುದ್ದಿನ ಕಂದ ಅನಸ್‌ನ ಒಪ್ಪಿಗೆಯಿಲ್ಲದೆ ಸ್ತನಪಾನ ನಿಲ್ಲಿಸುವುದಿಲ್ಲವೆಂದೂ ಆತನ ಸಮ್ಮತಿಯಿಲ್ಲದೆ ಪುನರ್ವಿವಾಹವಾಗುವುದಿಲ್ಲವೆಂದೂ ಉಮ್ಮು ಸುಲೈಮ್ ಶಪಥ ಮಾಡಿದರು.

ಮದೀನಾದ ಓರ್ವ ಕುಲೀನನೂ ಪ್ರಮುಖನೂ ಆಗಿದ್ದ ಅಬೂತ್ವಲ್‌ಹ ಎಂಬಾತನು ಉಮ್ಮು ಸುಲೈಮ್(ರ)ರನ್ನು ವಿವಾಹವಾಗುವ ಇಚ್ಛೆ ವ್ಯಕ್ತಪಡಿಸಿದಾಗ ಉಮ್ಮು ಸುಲೈಮ್ ತಾಳಿದ ನಿಲುವು ವಿವೇಕಪೂರ್ಣವಾಗಿತ್ತು. ಬಹುದೇವಾರಾಧಕನಾಗಿದ್ದ ಆತನ ವಿಶ್ವಾಸದ ಮೌಢ್ಯತೆಯನ್ನು ಆಕೆ ಎತ್ತಿ ತೋರಿಸಿದರು. ಬಹುದೇವಾರಾಧನೆಯ ನಿರರ್ಥಕತೆಯ ಕುರಿತಾದ ಆಕೆಯ ಮಾತು ಅಬೂತ್ವಲ್‌ಹರನ್ನು ಚಿಂತಿಸುವಂತೆ ಮಾಡಿತು. ಉಮ್ಮು ಸುಲೈಮ್(ರ) ಹೇಳುತ್ತಾರೆ: "ಒಬ್ಬರ ಅಪೇಕ್ಷೆಯನ್ನು ತಿರಸ್ಕರಿಸುವುದರಲ್ಲಿ ಬೇಸರವಿದೆ. ಆದರೆ ನಾನು ಮುಸ್ಲಿಮಳಾಗಿದ್ದೇನೆ. ತಾವು ಬಹುದೇವ ವಿಶ್ವಾಸಿಯಾಗಿರುತ್ತೀರಿ. ಕಾಡಿನಿಂದ ಕಡಿದು ತಂದ ಮರದ ತುಂಡನ್ನು ಕೆತ್ತಿ ನಿರ್ಮಿಸಿದ ವಿಗ್ರಹವನ್ನು ದೇವರೆಂದು ತಾವು ಪೂಜಿಸುತ್ತೀರಿ. ಉರಿಸಲಿಕ್ಕಾಗಿ ಉಪಯೋಗಿಸುವ ಮರದ ತುಂಡನ್ನು ಆರಾಧಿಸಲು ಬುದ್ಧಿಜೀವಿಯಾದ ತಮಗೆ ಹೇಗೆ ಸಾಧ್ಯವಾಗುತ್ತದೆ? ಬಹುದೇವಾರಾಧಕನೊಬ್ಬನನ್ನು ಪತಿಯಾಗಿ ಸ್ವೀಕರಿಸಲು ನನ್ನ ಧರ್ಮವು ನನಗೆ ಅನುಮತಿ ನೀಡುವುದಿಲ್ಲ. ಶಹಾದತ್ ಹೇಳಿ ತಾವು ಮುಸ್ಲಿಮ್ ಆಗುವುದಾದರೆ ತಮ್ಮನ್ನು ಪತಿಯಾಗಿ ಸ್ವೀಕರಿಸಲು ನಾನು ಸಿದ್ಧಳಿದ್ದೇನೆ. ತಾವು ಇಸ್ಲಾಮ್‌ಗೆ ಪರಿವರ್ತನೆಗೊಳ್ಳುವುದನ್ನೇ ಮಹ್ರ್ ಆಗಿ ನಾನು ಸ್ವೀಕರಿಸುತ್ತೇನೆ."

"ಚಿಂತಿಸಿ ನೋಡುತ್ತೇನೆ" ಎನ್ನುತ್ತಾ ಹೊರಟು ಹೋದ ಅಬೂತ್ವಲ್‌ಹ ಮುಸ್ಲಿಮ್ ಆಗಿ ಮರಳಿ ಬರುತ್ತಾರೆ. ಮಹ್ರ್ ಆಗಿ ಯಾವುದೇ ಸಂಪತ್ತನ್ನು ಅಪೇಕ್ಷಿಸದೆ ಅಬೂತ್ವಲ್‌ಹರ ಇಸ್ಲಾಮ್ ಸ್ವೀಕಾರವನ್ನೇ ಮಹ್ರ್ ಆಗಿ ಪಡೆದು ಉಮ್ಮು ಸುಲೈಮ್(ರ)ರವರು ಅಬೂತ್ವಲ್‌ಹರನ್ನು ಪತಿಯಾಗಿ ಸ್ವೀಕರಿಸಿದರು. ಅಬೂತ್ವಲ್‌ಹರಲ್ಲಿ ಆಕೆಗೆ ಉಮೈರ್ ಎಂಬ ಮಗುವೊಂದು ಜನಿಸಿತು. ಪತಿಯ ಅನುಪಸ್ಥಿತಿಯಲ್ಲಿ ಮಗು ಕಾಯಿಲೆ ಹಿಡಿದು ಮೃತ ಪಟ್ಟಿತು. ಉಮ್ಮು ಸುಲೈಮ್(ರ)ರವರೇ ಮಗುವಿನ ಅಂತ್ಯಕ್ರಿಯೆ ನಡೆಸಿದರು. ಅಬೂತ್ವಲ್‌ಹ ಬಂದರೆ ಯಾರೂ ಏನನ್ನೂ ಹೇಳಬೇಡಿ, ಎಲ್ಲಾ ವಿಷಯ ನಾನೇ ಹೇಳುತ್ತೇನೆಂದು ಉಮ್ಮು ಸುಲೈಮ್ ಮನೆಯವರಲ್ಲಿ ಹೇಳಿಟ್ಟರು. ಎಲ್ಲೋ ದೂರ ಹೋಗಿದ್ದ ಅಬೂತ್ವಲ್‌ಹ ಮರಳಿ ಮನೆಗೆ ಬಂದಾಗ ಎಂದಿನಂತೆ ನಗುಮುಖದಿಂದ ಪತಿಯನ್ನು ಸ್ವಾಗತಿಸಿದ ಉಮ್ಮು ಸುಲೈಮ್ ಊಟಕ್ಕೆ ತಯಾರಿ ಮಾಡಿದರು. "ಮಗು ಉಮೈರ್ ಎಲ್ಲಿ?" ಎಂದು ಪತಿ ವಿಚಾರಿಸಿದಾಗ "ನೀವು ಊಟ ಮಾಡಿರಿ, ಮತ್ತೆ ಮಾತನಾಡೋಣ" ಎಂದು ಉಮ್ಮು ಸುಲೈಮ್ ಊಟ ಬಡಿಸಿದರು. ಊಟವಾದ ಬಳಿಕ ಅವರಿಬ್ಬರೂ ತಮ್ಮ ಶಯನ ಕೋಣೆಗೆ ತೆರಳಿದರು. ಸರಸ ಸಲ್ಲಾಪ, ಸುಖಾಸ್ವಾದನೆಗಳ ಬಳಿಕ ಮಾತಿಗಾರಂಭಿಸಿದ ಉಮ್ಮು ಸುಲೈಮ್(ರ) ಕೇಳುತ್ತಾರೆ: "ಅಬೂತ್ವಲ್‌ಹ, ಒಂದು ಮನೆಯವರು ಇನ್ನೊಂದು ಮನೆಯಿಂದ ಒಂದು ಮಗುವನ್ನು ಸಾಲವಾಗಿ ಪಡೆದರೆಂದಿಟ್ಟುಕೊಳ್ಳೋಣ. ಅವರು ಮಗುವನ್ನು ಹಿಂತಿರುಗಿಸಬೇಕೆಂದು ಹೇಳಿದರೆ ಕೊಡದಿರಲು ಆಗುತ್ತದೆಯೇ?" "ಅದು ಸಾಧ್ಯವಿಲ್ಲ, ಕೊಡಲೇ ಬೇಕಾಗುತ್ತದೆ" ಎಂದು ಅಬೂತ್ವಲ್‌ಹ ಉತ್ತರಿಸಿದರು. ಹಾಗಿದ್ದರೆ ಉಮೈರ್‌ನ ವಿಷಯದಲ್ಲಿ ನೀವು ದುಃಖಿಸಬೇಡಿರಿ, ಅಲ್ಲಾಹನಲ್ಲಿ ನಿರೀಕ್ಷೆಗಳನ್ನರ್ಪಿಸಿರಿ" ಎಂದು ಉಮ್ಮು ಸುಲೈಮ್(ರ) ಪತಿಯನ್ನು ಸಮಾಧಾನಿಸಿದರು. ಅಬೂತ್ವಲ್‌ಹರಿಗೆ ವಿಷಯ ತಿಳಿಯಿತು. ಅವರು ನೇರವಾಗಿ ಪ್ರವಾದಿ(ಸ)ರ ಬಳಿಗೆ ತೆರಳಿ ಉಮ್ಮು ಸುಲೈಮರ ಮಾತುಗಳನ್ನು ಪ್ರವಾದಿ(ಸ)ರ ಗಮನಕ್ಕೆ ತಂದರು. ಆಗ ಪ್ರವಾದಿ(ಸ)ರು "ಕಳೆದ ರಾತ್ರಿ ಅಲ್ಲಾಹು ನಿಮ್ಮಿಬ್ಬರನ್ನು ಅನುಗ್ರಹಿಸಲಿ" ಎಂದು ಪ್ರಾರ್ಥಿಸಿದರು.

ಮಗನ ಭವಿಷ್ಯತ್ತಿನ ಕುರಿತು ಆಕಾಂಕ್ಷಾಭರಿತಳಾದ ತನ್ನ ಅತ್ಯುತ್ತಮ ಶಿಷ್ಯೆಯ ಅಪೇಕ್ಷೆಯನ್ನು ನಿರಾಕರಿಸಲು ಪ್ರವಾದಿ(ಸ)ರಿಗೆ ಸಾಧ್ಯವಾಗಲಿಲ್ಲ. ಪ್ರವಾದಿ(ಸ)ರನ್ನು ಪರಿಚರಿಸುವ ಪುಣ್ಯ ಮತ್ತು ಅವರ ಸಹವಾಸದ ಮೂಲಕ ಲಭಿಸುವ ಅಮೂಲ್ಯ ಜ್ಞಾನವನ್ನು ಗಳಿಸಲು ಅವಕಾಶವುಂಟು ಮಾಡಿ ಕೊಡುವುದೇ ಉಮ್ಮು ಸುಲೈಮ್(ರ)ರ ಉದ್ದೇಶವಾಗಿತ್ತು. ಪ್ರವಾದಿ(ಸ)ರು ಆ ಬಾಲಕನ ಹಣೆಯನ್ನು ಚುಂಬಿಸಿ "ಓ ಅಲ್ಲಾಹ್, ಇವನಿಗೆ ಸಂಪತ್ತು ಹಾಗೂ ಸಂತಾನವನ್ನು ವೃದ್ಧಿಸು, ಇವನ ಪಾಪಗಳನ್ನು ಕ್ಷಮಿಸು" ಎಂದು ಪ್ರಾರ್ಥಿಸಿದರು. ಈ ಪ್ರಾರ್ಥನೆಯ ಫಲ ಅನಸ್(ರ)ರವರ ಮುಂದಿನ ಜೀವನದಲ್ಲಿ ಪ್ರಜ್ವಲಿಸಿತು. ತೊಂಬತ್ತೊಂಬತ್ತು ವರ್ಷಗಳ ಕಾಲ ಅವರು ಜೀವಿಸಿದ್ದರು. ಮಕ್ಕಳು, ಮೊಮ್ಮಕ್ಕಳಿರುವ ವಿಪುಲವಾದ ಕುಟುಂಬ. ಫಲ ಸಂಪನ್ನವಾದ ಒಂದು ವಿಶಾಲ ತೋಟ. ಅನಸ್(ರ)ರವರೇ ಒಮ್ಮೆ ಹೀಗೆ ನೆನಪಿಸುತ್ತಾರೆ: "ನನ್ನ ಸಂತಾನ ಪರಂಪರೆಯಲ್ಲಿ ತೊಂಬತ್ತೆಂಟು ಮಂದಿಯನ್ನು ನಾನೇ ದಫನ ಮಾಡಿದ್ದೇನೆ. ಬದುಕಿನಲ್ಲಿ ವೈರಾಗ್ಯ ತೋರುವಷ್ಟು ದೀರ್ಘ ಕಾಲ ನಾನು ಬದುಕಿದೆ. ನನ್ನ ತೋಟದಿಂದ ವರ್ಷಕ್ಕೆ ರಡು ಬಾರಿ ಕೃಷಿಯುತ್ಪನ್ನಗಳನ್ನು ನಾನೇ ಹೊತ್ತು ಸಾಗಿಸಿದ್ದೇನೆ. ನಾಲ್ಕನೆಯ ಕಾರ್ಯವನ್ನು ಸಹ ನೆರವೇರಿಸಬೇಕೆಂಬುದೇ ನನ್ನ ಆಸೆ."

ಪ್ರವಾದಿ(ಸ)ರ ಪರಿಚಾರಕನಾಗಿ ನಿಯುಕ್ತರಾದ ಅನಸ್(ರ)ರವರು ಪ್ರವಾದಿ(ಸ)ರನ್ನು ನೆರಳಿನಂತೆ ಹಿಂಬಾಲಿಸಿದರು. (11ನೇ ಪುಟಕ್ಕೆ)

سلسلة الأحاديث الضعيفة والموضوعة

# ದುರ್ಬಲ ಮತ್ತು ಕೃತಕ ಹದೀಸ್‌ಗಳು

## ಒಂದು ಅವಲೋಕನ ಭಾಗ - 16ಧಿ



ಎಂ.ಇ. ಅಶ್ರಫ್ ಮುಸ್ಲಿಯಾರ್
ಕಾಸರಗೋಡು

# ಹದೀಸ್ ಗ್ರಂಥಗಳಲ್ಲಿ ಪುರೋಹಿತ ಕುತಂತ್ರ...!

ಪುರೋಹಿತರ ಹದೀಸ್ ಜ್ಞಾನ ಅತ್ಯಂತ ಸೀಮಿತ. ಪವಿತ್ರ ಕುರ್‌ಆನ್‌ನ ಬಗೆಗಿನ ಅವರ ನಿರ್ಲಕ್ಷ್ಯವಂತೂ ಇಡೀ ಸಮುದಾಯವನ್ನೇ ಶೋಷಣೆಗೊಳಪಡಿಸಿದೆ. ಇದೊಂದು ದೊಡ್ಡ ದುರಂತವೆಂದೇ ಹೇಳಬೇಕಾಗುತ್ತದೆ.

ಯಾವ ಹದೀಸ್ ಸಹೀಹ್, ಯಾವುದು ದಈಫ್ ಎಂಬುದನ್ನು ವಿವೇಚಿಸಿ ತಿಳಿಯುವ ವ್ಯವಧಾನವಿಲ್ಲದ ಪುರೋಹಿತರು ಫಿಕ್ಹ್ ಗ್ರಂಥಗಳ ಅಪ್ಪಟ ಮುಖಲ್ಲಿದ್‌ಗಳಾಗಿರುವುದರಿಂದ ಸಹೀಹುಲ್ ಬುಖಾರಿ, ಮುಸ್ಲಿಮ್ ಸೇರಿದಂತೆ ಯಾವುದೇ ಅಧಿಕೃತ ಹದೀಸ್ ಗ್ರಂಥಗಳ ಕುರಿತು, ಅವುಗಳಲ್ಲಿ ವರದಿಯಾಗಿರುವ ಹದೀಸ್‌ಗಳ ಕುರಿತು ನಿಖರವಾದ ಪಾಂಡಿತ್ಯ ಹೊಂದಿಲ್ಲ ಎನ್ನುವುದು ಹಲವಾರು ಬಾರಿ ಅವರ ಕೃತ್ಯಗಳಿಂದಲೇ ಸಾಬೀತಾಗಿದೆ.

ಪ್ರವಾದಿ(ಸ)ರವರು ಹೇಳಿರುವುದಾಗಿ ಇಮಾಮ್ ಬುಖಾರಿ ಹಾಗೂ ಮುಸ್ಲಿಮ್ ವರದಿ ಮಾಡಿದ್ದಾರೆಂದು ಶುಕ್ರವಾರ ಜುಮುಅದ ವೇಳೆ ಮಸೀದಿಯ ಮುಕ್ರಿ (ಮುಅದ್ದಿನ್) ಹಸಿ ಸುಳ್ಳು ಆವರ್ತಿಸುವುದರ ಬಗ್ಗೆ ಇದೇ ಅಂಕಣದಲ್ಲಿ ಹಿಂದೆ ಬರೆದಿದ್ದೆ.

ಇದೇ ರೀತಿಯ ಮತ್ತೊಂದು ಪುರೋಹಿತ ಕುತಂತ್ರ ನೋಡಿ. ಕೇರಳದ ಸಂಸ್ಥಾನ ಸುನ್ನಿಗಳು ಪ್ರಕಟಿಸುವ ನುಸ್ರತುಲ್ ಅನಾಂ ಎಂಬ ಪತ್ರಿಕೆಯಲ್ಲಿ ಸಹೀಹುಲ್ ಬುಖಾರಿಯಲ್ಲಿಲ್ಲದ ಒಂದು ಹದೀಸನ್ನು ಇಮಾಮ್ ಬುಖಾರಿ ವರದಿ ಮಾಡಿರುವುದಾಗಿ ಹಸಿ ಸುಳ್ಳು ಬರೆದಿದ್ದಾರೆ. ಸಂಸ್ಥಾನ ಸುನ್ನಿ ಮುಖಂಡ ನಯೀಬ್ ಮೌಲವಿ ಹೇಳುವುದನ್ನು ಗಮನಿಸಿ: "ಇಮಾಮ್ ಬುಖಾರಿ ತಮ್ಮ ಸಹೀಹ್‌ನಲ್ಲಿ "ಈದ್ ದಿನದಂದು ಜನರು ಪರಸ್ಪರ ಹೇಳಬೇಕೆಂದು ವರದಿಯಾಗಿರುವ ಹದೀಸ್"ಗಳು ಎಂಬ ಅಧ್ಯಾಯವೊಂದನ್ನು ಸೇರಿಸಿದ್ದು ಅದರಲ್ಲಿ ತಕಬ್ಬಲಲ್ಲಾಹು ಮಿನ್ನಾ ವ ಮಿಂಕುಂ ಎಂಬ ಶುಭಾಶಯ ಪ್ರಾರ್ಥನೆಯನ್ನು ಉಲ್ಲೇಖಿಸಲಾಗಿದೆ. (ನುಸ್ರತುಲ್ ಅನಾಮ್, 2008, ನವೆಂಬರ್)

ಇಂತಹ ಒಂದು ಅಧ್ಯಾಯವಾಗಲೀ, ಶುಭ ಕೋರುವ ಪ್ರಾರ್ಥನೆಯಾಗಲೀ ಸಹೀಹುಲ್ ಬುಖಾರಿಯಲ್ಲಿಲ್ಲ. ಬುಖಾರಿಯಲ್ಲಿಲ್ಲದ ಹದೀಸನ್ನು ಇಮಾಮ್ ಬುಖಾರಿ ವರದಿ ಮಾಡಿದ್ದಾರೆ ಎಂದು ಹೇಳುವ ಈ ಮೌಲವಿಯ ಹದೀಸ್ ಪಾಂಡಿತ್ಯ ಯಾವ ಮಟ್ಟದ್ದು ಎಂದು ಓದುಗರೇ ನಿರ್ಧರಿಸಲಿ.

ವಾಸ್ತವದಲ್ಲಿ ಈ ಹದೀಸನ್ನು ವರದಿ ಮಾಡಿರುವುದು ಇಮಾಮ್ ಬೈಹಖಿ ತಮ್ಮ ಸುನನ್‌ನಲ್ಲಿ. ಇನ್ನು ದುರ್ಬಲವಾದ ಹಲವು ಹದೀಸ್‌ಗಳನ್ನು ಸಹೀಹ್‌ಗೊಳಿಸಿ ಜನರನ್ನು ದಾರಿ ತಪ್ಪಿಸಿದ ಹಲವು ನಿದರ್ಶನಗಳೂ ಇವೆ.

ಕೇರಳ ಖುರಾಫಿಗಳ ಬರಹಗಾರ ಇಸ್ಮಾಯಿಲ್ ಅಜ್ಞರಿ ಎಂಬಾತ ರಚಿಸಿರುವ "ಕರ್ಮಶಾಸ್ತ್ರ: ವಹ್ಹಾಬಿ ನಿಲುವಿಗೊಂದು ತಿದ್ದುಪಡಿ" ಎಂಬ ಪುಸ್ತಕದಲ್ಲಿ ಬರೆಯುತ್ತಾರೆ: ಕುರ್‌ಆನ್ ಕಂಠಪಾಠ ಮಾಡುವ ಮುನ್ನ ಎರಡು ರಕ್‌ಅತ್ ನಮಾಝ್ ಮಾಡುವುದು ಸುನ್ನತ್ ಎಂದು ಪೂರ್ವಿಕ ವಿದ್ವಾಂಸರು ದಾಖಲಿಸಿದ್ದಾರೆ. ಈ ಬಗ್ಗೆ ಇಮಾಮ್ ತಬ್ರಾನಿ ತಮ್ಮ ಮುಲ್‌ಜಮುಲ್ ಕಬೀರ್‌ನಲ್ಲಿ ಉಲ್ಲೇಖಿಸಿದ ಹದೀಸ್ ಶೈಖೈನಿ (ಬುಖಾರಿ, ಮುಸ್ಲಿಮ್)ಗಳ ನಿಬಂಧನೆ ಪ್ರಕಾರ ಸಹೀಹ್ ಆಗಿದೆ. (IBID ಪುಟ 32)

ವಾಸ್ತವದಲ್ಲಿ ಇದೊಂದು ನಿರಾಧಾರ ಹದೀಸ್. ಇದರ ಸನದ್‌ನಲ್ಲಿರುವ ವಲೀದ್ ಬಿನ್ ಮುಸ್ಲಿಮ್ ಎಂಬ ವ್ಯಕ್ತಿ ಮುದಲ್ಲಿಸ್ (ತಾನು ಹದೀಸ್ ಕೇಳಿ ಕಲಿತ ಗುರುವನ್ನು ಪ್ರಸ್ತಾಪಿಸದೆ ಇಂತಿಂತಹವರಿಂದ ಎಂದು ಉಲ್ಲೇಖಿಸುವ ವ್ಯಕ್ತಿ) ಆಗಿದ್ದಾರೆ ಎಂದು ಹದೀಸ್ ವಿದ್ವಾಂಸರು ಸ್ಪಷ್ಟ ಪಡಿಸಿದ್ದಾರೆ.

ಈ ದುರ್ಬಲ ಹದೀಸನ್ನು ತನ್ನ ಖುರಾಫಾತ್ ಸಮರ್ಥಿಸಲು ಮುಸ್ಲಿಯಾರ್ ಸಹೀಹ್‌ಗೊಳಿಸಿರುವುದು ಹದೀಸ್ ಅಧ್ಯಯನದ ಕ್ಷೇತ್ರದಲ್ಲಿ ಆತನಿಗಿರುವ ಸೀಮಿತ ಜ್ಞಾನವನ್ನು ಅನಾವರಣಗೊಳಿಸುತ್ತದೆ. ಇನ್ನು ಸಹೀಹ್ ಆದ ಹದೀಸನ್ನು ದುರ್ಬಲಗೊಳಿಸುವ ಇವರ ವಿಫಲ ತಂತ್ರ ನೋಡಿ.

ಪ್ರಮುಖ ಸಹಾಬಿ ಅಬ್ದುಲ್ಲಾಹಿ ಬಿನ್ ಮಸ್‌ಊದ್(ರ)ರವರು ಒಮ್ಮೆ ಫಜ್ರ್ ನಮಾಝ್‌ಗೆ ಮಸೀದಿಗೆ ತೆರಳಿದಾಗ ಅಲ್ಲಿ ಓರ್ವ ವ್ಯಕ್ತಿಯ ನೇತೃತ್ವದಲ್ಲಿ ಜನರು ಚಿಕ್ಕ ಚಿಕ್ಕ ಕಲ್ಲುಗಳನ್ನು ಹಿಡಿದುಕೊಂಡು ತಸ್‌ಬೀಹ್ ಎಣಿಸುತ್ತಿದ್ದುದು ಕಂಡು ಬಂತು. ಪ್ರವಾದಿ(ಸ)ರವರು ಕಲಿಸಿ ಕೊಡದ ಈ ನೂತನ ಸಂಪ್ರದಾಯವನ್ನು ಆ ಸಹಾಬಿವರ್ಯರು ಕಟುವಾದ ಮಾತುಗಳಲ್ಲಿ ವಿರೋಧಿಸಿದ್ದು ಸಹೀಹ್ ಆದ ಪರಂಪರೆಯ ಮೂಲಕ ವರದಿಯಾಗಿದೆ. ಈ ಹದೀಸ್ ತಮ್ಮ "ದ್ಸಿಕ್ರ್ ಹಲ್ಕ" ಎಂಬ ನವೀನ ಆಚಾರಕ್ಕೆ ವಿರುದ್ಧವಾಗಿರುವುದನ್ನು ಮನಗಂಡ ಪುರೋಹಿತರೊಬ್ಬ ಅದನ್ನು ದುರ್ಬಲಗೊಳಿಸುವುದು ನೋಡಿ "ಇಬ್ನು ಮಸ್‌ಊದ್ ತಸ್‌ಬೀಹ್ ಎಣಿಸುವವರನ್ನು ವಿರೋಧಿಸಿದ ಘಟನೆ ಯಾವುದೇ ಸಹೀಹ್ ಆದ ಹದೀಸ್‌ನಲ್ಲೂ ವರದಿಯಾಗಿರುವುದಿಲ್ಲ". (ಕರ್ಮಶಾಸ್ತ್ರ: ವಹ್ಹಾಬಿ ನಿಲುವಿಗೊಂದು ತಿದ್ದುಪಡಿ, ಪುಟ 75)

ಅಬೂದಾವೂದ್‌ನ "ವಿತ್ರ್‌ನಲ್ಲಿ ಖುನೂತ್" ಎಂಬ ಅಧ್ಯಾಯದಲ್ಲಿ ಉಮರ್(ರ)ರವರು ಉಬಯ್ಯ್(ರ)ರವರ ನೇತೃತ್ವದಲ್ಲಿ ಜನರನ್ನು ಒಗ್ಗೂಡಿಸಿದಾಗ ಉಬಯ್ಯ್ ಇಪ್ಪತ್ತು ರಾತ್ರಿಗಳಲ್ಲಿ (ಇಶ್‌ರೀನ ಲೈಲ) ನಮಾಝ್‌ಗೆ ನೇತೃತ್ವ ನೀಡಿದರು ಎಂದಿರುವುದನ್ನು ಇಪ್ಪತ್ತು ರಕ್‌ಅತ್ ಎಂಬುದಾಗಿ ಕೆಲವು ಹನಫಿ ಮುಖಲ್ಲಿದ್‌ಗಳು ಸ್ವಾರ್ಥಕ್ಕಾಗಿ ಬದಲಿಸಿದ್ದಾರೆ.

ಅಬೂದಾವೂದ್ ಗ್ರಂಥದ ಯಾವುದೇ ಆವೃತ್ತಿಯಲ್ಲೂ "ಇಶ್‌ರೀನ ರಕ್‌ಅತ್" (ಇಪ್ಪತ್ತು ರಕ್‌ಅತ್) ಎಂದು ಕಾಣಲು ಸಾಧ್ಯವಿಲ್ಲ. ಆದರೆ ಉತ್ತರ ಭಾರತದ ಶೈಖ್ ಮಹ್ಮೂದ್ ಹಸನ್ ಎಂಬ ಹನಫಿ ಪಂಡಿತನ ವ್ಯಾಖ್ಯಾನದೊಂದಿಗೆ ಹೊರ ಬಂದ ಅಬೂದಾವೂದ್‌ನಲ್ಲಿ ಪ್ರಸ್ತುತವಾಗಿ ಇಪ್ಪತ್ತು ರಕ್‌ಅತ್ ಎಂಬ ತಿದ್ದುಪಡಿ ಮಾಡಲಾಗಿದೆ. ಇಲ್ಲಿ ಉಲ್ಲೇಖಿಸಿರುವುದು ಕೆಲವು ನಿದರ್ಶನಗಳು ಮಾತ್ರ. ಹದೀಸ್ ಗ್ರಂಥಗಳಲ್ಲಿ ಪುರೋಹಿತ ವರ್ಗ ನಡೆಸಿರುವ ಹಸ್ತಕ್ಷೇಪ, ತಿದ್ದುಪಡಿ ಮತ್ತು ದುರ್ವ್ಯಾಖ್ಯಾನಗಳ ವ್ಯಾಪ್ತಿ ಎಣಿಕೆಗೆ ಮೀರಿದ್ದಾಗಿದೆ. ಸಮಾಧಿಯನ್ನು ಹಾರೆ ಹಾಕಿ ಭದ್ರ ಪಡಿಸುವುದು, ಎತ್ತರಿಸಿ ಕಟ್ಟುವುದು ಇತ್ಯಾದಿಗಳನ್ನು ವಿರೋಧಿಸಿ ವರದಿಯಾಗಿರುವ "ಮುತವಾತಿರ್" ಆದ ಸರ್ವ ಹದೀಸ್‌ಗಳನ್ನೂ ಪುರೋಹಿತರು ದುರ್ವ್ಯಾಖ್ಯಾನಿಸಿ ತಮ್ಮ ಸ್ವಾರ್ಥಕ್ಕೆ ತಕ್ಕಂತೆ ಅರ್ಥ ಪಲ್ಲಟ ಮಾಡಿಕೊಂಡಿದ್ದಾರೆ.



# ಮಹ್ರ್ ಪಡೆದ ಸಹಾಬಿ ವನಿತೆ

(3ನೇ ಪುಟದಿಂದ)

ಮನೆಯಲ್ಲೂ ಹೊರಗೂ ಊರಲ್ಲೂ ಪ್ರಯಾಣದಲ್ಲೂ ಅನಸ್(ರ)ರವರು ರಾತ್ರಿ ಹಗಲೆನ್ನದೆ ಪ್ರವಾದಿ (ಸ)ರೊಂದಿಗಿದ್ದರು. ಈ ಮಧ್ಯೆ ಪ್ರವಾದಿ(ಸ)ರ ಜೀವನದ ಹಲವಾರು ಮಹತ್ವದ ಘಟನೆಗಳಿಗೆ ಅನಸ್(ರ) ಸಾಕ್ಷಿಯಾಗಿದ್ದರು. ರಸೂಲ್(ಸ)ರ ಅಸಂಖ್ಯಾತ ಉಪದೇಶ ನಿರ್ದೇಶನಗಳನ್ನು ನೇರವಾಗಿ ಆಲಿಸಿದರು. ಆ ಮಾದರಿ ಜೀವನದ ನಾನಾ ದಿಕ್ಕುಗಳನ್ನು ನಿಖರವಾಗಿ ಕಂಡು ಕಲಿತರು. ಈ ಸಹವಾಸವು ಅನಸ್(ರ)ರನ್ನು ಒಬ್ಬ ಅಧಿಕೃತ ವಿದ್ವಾಂಸನಾಗಿ ಪರಿವರ್ತಿಸಿತು. ಅವರು ಪ್ರವಾದಿ(ಸ)ರಿಂದ ಅನೇಕ ಹದೀಸ್‌ಗಳನ್ನು ವರದಿ ಮಾಡಿದ್ದಾರೆ.

ಪ್ರವಾದಿ(ಸ)ರ ಸ್ವಭಾವ ಮಹಿಮೆಯನ್ನು ಬೇರೆಲ್ಲರಿಗಿಂತಲೂ ಹತ್ತಿರದಿಂದ ಬಲ್ಲವರು ಅನಸ್(ರ)ರವರಾಗಿದ್ದಾರೆ. ಸೇವಕನನ್ನು ಮನುಷ್ಯನಾಗಿ ಕಾಣಲು ಮತ್ತು ತಪ್ಪುಗಳನ್ನು ಮನ್ನಿಸಲು ಪ್ರವಾದಿ(ಸ)ರಿಗೆ ಸಾಧ್ಯವಾಯಿತು. ಅನಸ್‌ರನ್ನು ಜತೆಯಲಿ ಕೂರಿಸಿ ಒಂದೇ ಪಾತ್ರೆಯಿಂದ ಆಹಾರ ಉಣಿಸಿದರು. ಸ್ವಂತ ಮಗನ ಹಾಗೆ ತಿಳಿದಿರದಂತಹದ್ದನ್ನು ತಿಳಿಸಿ ಕಲಿಸಿಕೊಟ್ಟರು. ಹತ್ತು ವರ್ಷಗಳ ಸೇವಾವಧಿಯಲ್ಲಿ ಒಮ್ಮೆಯೂ ಬೈದು ನಿಂದಿಸಲಿಲ್ಲ, ಶಿಕ್ಷಿಸಲಿಲ್ಲ. ರಸೂಲ್(ಸ)ರ ಅನನ್ಯ ಸ್ವಭಾವದ ಕುರಿತು ಅನಸ್(ರ) ಹೀಗೆ ವರ್ಣಿಸುತ್ತಾರೆ: "ನಾನು ಪ್ರವಾದಿ(ಸ)ರ ಸೇವಕನಾಗಿ ಹತ್ತು ವರ್ಷ ಅವರೊಂದಿಗಿದ್ದೆ. ಇಷ್ಟು ವರ್ಷಗಳಲ್ಲಿ ನನ್ನ ನ್ಯೂನತೆಗಳ ಬಗ್ಗೆ ಒಮ್ಮೆಯೂ ಅತೃಪ್ತಿ ವ್ಯಕ್ತಪಡಿಸಲಿಲ್ಲ. ಮನೆಯವರು ನನ್ನ ಬಗ್ಗೆ ಏನಾದರೂ ದೂರು ಹೇಳಿದರೆ ಅವನನ್ನು ಏಕೆ ಆಕ್ಷೇಪಿಸುತ್ತೀರಿ? ವಿಧಿಯಿಲ್ಲ ಎಂದು ಸಮಾಧಾನಿಸಿದರೆ ಸಾಕು. ಅಲ್ಲಾಹನಿಚ್ಛಿಸಿದ್ದು ನಡೆಯುತ್ತದೆ. ಅವನಿಚ್ಛಿಸದಿದ್ದರೆ ಏನೂ ಆಗುವುದಿಲ್ಲ ಎಂದು ಪ್ರವಾದಿ(ಸ)ರು ಹೇಳುತ್ತಿದ್ದರು."

ಪ್ರವಾದಿ(ಸ)ರ ವಿಯೋಗದ ಬಳಿಕ ಆ ಅಮೂಲ್ಯ ಸಹವಾಸದ ಮಧುರ ಸ್ಮರಣೆಗಳನ್ನು ಮೆಲುಕು ಹಾಕುತ್ತಾ ಅನಸ್(ರ) ಜೀವಿಸಿದರು. ನಾನು ನನ್ನ ಪ್ರೀತಿಪಾತ್ರರನ್ನು ಕಾಣದ ಒಂದು ರಾತ್ರಿಯೂ ಇರಲಿಲ್ಲ ಎಂದು ಅವರು ಆಗಾಗ ನೆನಪಿಸಿ ದುಃಖಿಸುತ್ತಿದ್ದರು. ಅನಸ್(ರ)ರವರ ಉಂಗುರದಲ್ಲಿ "ಮುಹಮ್ಮದುರ್ರಸೂಲುಲ್ಲಾಹ್" ಎಂದು ಕೆತ್ತಲಾಗಿತ್ತು . ಉಮ್ಮು ಸುಲೈಮ್(ರ)ರ ಮಗನಂತೆ ಪ್ರವಾದಿ(ಸ)ರ ನಮಾಝ್‌ನೊಂದಿಗೆ ಸಾಮ್ಯತೆಯುಳ್ಳ ನಮಾಝನ್ನು ಬೇರೆ ಯಾರಲ್ಲೂ ನಾನು ಕಾಣಲಿಲ್ಲ ಎಂದು ಅನಸುಬ್‌ನು ಮಾಲಿಕ್‌ರ ಕುರಿತು ಅಬೂಹುರೈರ(ರ) ಹೇಳುತ್ತಾರೆ. ಮಾಲಕನು ತನ್ನ ಸೇವಕನೊಂದಿಗೆ ಹೇಗಿರಬೇಕು ಮತ್ತು ಸೇವಕನು ತನ್ನ ಮಾಲಕನೊಂದಿಗೆ ಹೇಗಿರಬೇಕು ಎಂಬುದನ್ನು ಪ್ರವಾದಿ(ಸ)ರೆಂಬ ಯಜಮಾನ ಮತ್ತು ಅನಸುಬ್‌ನು ಮಾಲಿಕ್(ರ) ಎಂಬ ಸೇವಕನ ಇತಿಹಾಸದಿಂದ ಕಲಿತುಕೊಳ್ಳಬಹುದಾಗಿದೆ. ●

# ಇಸ್ಲಾಮೀ ಸಂದೇಶ ಪ್ರಚಾರದ ಪ್ರವಾದಿ ಮಾದರಿ

ಇಸ್ಮಾಯೀಲ್ ಶಾಫಿ

**ಅಲ್ಲಾಹು ಭೂಮಿಗೆ ನಿಯೋಗಿಸಿದ ಸಂದೇಶವಾಹಕರೆಲ್ಲರೂ ಬೋಧಿಸಿದ ಇಸ್ಲಾಮ್ ಧರ್ಮವು ಅಂತಿಮ ಪ್ರವಾದಿ ಮುಹಮ್ಮದ್(ಸ)ರ ಮೂಲಕ ಪೂರ್ತೀಕರಿಸಲ್ಪಟ್ಟಿತು. ಅಲ್ಲಾಹನ ಆ ಘೋಷಣೆಯನ್ನು ವಿಶುದ್ಧ ಕುರ್‌ಆನ್ ನಮಗೆ ಕಲಿಸಿ ಕೊಡುತ್ತದೆ. "ಇಂದು ನಾನು ನಿಮಗೆ ನಿಮ್ಮ ಧರ್ಮವನ್ನು ಪರಿಪೂರ್ಣಗೊಳಿಸಿ ಕೊಟ್ಟಿರುತ್ತೇನೆ ಮತ್ತು ಇಸ್ಲಾಮನ್ನು ನಾನು ನಿಮಗೆ ಧರ್ಮವಾಗಿ ತೃಪ್ತಿಪಟ್ಟಿದ್ದೇನೆ". (ಕುರ್‌ಆನ್ 5:3) ಅಲ್ಲಾಹು ಪೂರ್ಣಗೊಳಿಸಿದ ಈ ಧರ್ಮದಲ್ಲಿ ಇನ್ನು ಯಾರೂ ಏನನ್ನೂ ಸೇರ್ಪಡೆಗೊಳಿಸಲಾಗುವುದಿಲ್ಲವೆಂಬುದು ಸ್ಪಷ್ಟ. ತನ್ನ ದೌತ್ಯ ಪೂರ್ತೀಕರಣದ ಕೊನೆಯ ದಿನಗಳಲ್ಲಿ ಲಕ್ಷಕ್ಕೂ ಮೇಲ್ಪಟ್ಟ ಅನುಯಾಯಿಗಳನ್ನು ಸಾಕ್ಷಿಯಾಗಿಸಿ ಪ್ರವಾದಿ(ಸ)ರು ಈ ಸೂಕ್ತವನ್ನು ಘೋಷಿಸುತ್ತಾರೆ. ಅದರೊಂದಿಗೆ ಅವರು ಹೇಳುತ್ತಾರೆ: "ಎರಡು ವಿಷಯಗಳನ್ನು ನಾನು ನಿಮಗೆ ಬಿಟ್ಟು ಹೋಗುತ್ತಿದ್ದೇನೆ. ಅವುಗಳನ್ನು ನೀವು ಬಿಗಿಯಾಗಿ ಹಿಡಿದಿರುವ ತನಕ ನೀವು ದಾರಿ ತಪ್ಪಲಾರಿರಿ. ಅವುಗಳೆಂದರೆ ಪವಿತ್ರ ಕುರ್‌ಆನ್ ಮತ್ತು ಸುನ್ನತ್‌ಗಳಾಗಿವೆ.**

"ಇಸ್ಲಾಮ್ ಕಾಲಾತೀತವಾದ ತತ್ವ ಶಾಸ್ತ್ರವಾಗಿದೆ. ಮಾನವ ಇತಿಹಾಸದ ಇರುಳು ಕವಿದ ಅಧ್ಯಾಯಗಳಲ್ಲಿ ವಿಶ್ವ ವಿಮೋಚನೆಯ ಬೆಳಕಾಗಿ ಉದಿಸಿ, ಕೇವಲ ನಾಮ ಮತ್ತು ಚಿಹ್ನೆಗಳನ್ನು ಮಾತ್ರ ಉಳಿಸಿ ಅಕಾಲ ಮರಣಕ್ಕೀಡಾದ ಸಕಲ ತತ್ವ ಸಿದ್ಧಾಂತಗಳನ್ನು ಇಸ್ಲಾಮ್ ತನ್ನ ವಿಶಿಷ್ಟ ತತ್ವಾದರ್ಶಗಳಿಂದ ಪರಾಭವಗೊಳಿಸುತ್ತದೆ. ಇತರ ಧರ್ಮಗಳಿಗೂ ಇಸ್ಲಾಮಿಗೂ ಇರುವ ಮೌಲಿಕವಾದ ವ್ಯತ್ಯಾಸವೇನೆಂದರೆ, ಸರ್ವ ಲೋಕಗಳ ಸೃಷ್ಟಿಕರ್ತನಾದ ದೇವನಿಗೆ ಬದುಕನ್ನು ಸಂಪೂರ್ಣವಾಗಿ ಸಮರ್ಪಿಸಬೇಕೆಂದು ಇಸ್ಲಾಮ್ ಆಗ್ರಹಿಸುತ್ತದೆ. ಜಗದೊಡೆಯನಾದ ಅಲ್ಲಾಹು ಮಾತ್ರವೇ ಆರಾಧನೆಯ ಸರ್ವ ಸೀಮೆಗಳಿಗೂ ಅರ್ಹನಾಗಿರುವವನು. ಆದ್ದರಿಂದ ಅವನಿಗೆ ಸಂಪೂರ್ಣ ಶರಣಾಗತರಾಗಬೇಕು. ಇದುವೇ ಇಸ್ಲಾಮಿನ ಮೂಲ ಸಿದ್ಧಾಂತ.

ವಿಕಲ ವಿಶ್ವಾಸಗಳ ಇರುಳಲ್ಲಿ ಹೂತು ಹೋಗಿದ್ದ ಜನ ಸಮೂಹವನ್ನು ಏಕದೇವತ್ವದ ರಾಜಮಾರ್ಗಕ್ಕೆ ಕರೆ ತರಲಿಕ್ಕಾಗಿ ವಿವಿಧ ಕಾಲಗಳಲ್ಲಿ ವಿವಿಧ ದೇಶಗಳಲ್ಲಿ ವಿವಿಧ ಸಮುದಾಯಗಳ ಮಧ್ಯೆ ದೇವ ಸಂದೇಶವಾಹಕರನ್ನು ನಿಯುಕ್ತಿಗೊಳಿಸಲಾಗಿದೆಯೆಂದು ಪವಿತ್ರ ಕುರ್‌ಆನ್ ಪ್ರಸ್ತಾಪಿಸಿದೆ.

"(ಪ್ರವಾದಿಯವರೇ) ನನ್ನ ಹೊರತು ಆರಾಧ್ಯರೇ ಇಲ್ಲ. ಆದುದರಿಂದ ನನ್ನನ್ನು ಮಾತ್ರ ಆರಾಧಿಸಿರಿ ಎಂದು (ದಿವ್ಯ) ಸಂದೇಶ ನೀಡದೆ ನಾವು ನಿಮಗಿಂತ ಮುಂಚೆ ಯಾವ ಸಂದೇಶವಾಹಕರನ್ನೂ ಕಳುಹಿಸಲಿಲ್ಲ." (ಕುರ್‌ಆನ್ 21:25)

ಅಕ್ರಮಗಳು ಕಟ್ಟೆಯೊಡೆದು ಪ್ರವಹಿಸುವಾಗಲೂ ಕುಲ-ಗೋತ್ರ ವಿದ್ವೇಷಗಳು ವಿವಿಧ ರೂಪ-ಭಾವಗಳಲ್ಲಿ ನೆಲೆನಿಲ್ಲುವಾಗಲೂ ವಿಶ್ವಾಸ ಪರಿವರ್ತನೆಯ ಮೂಲಕ ಮಾನವರನ್ನು ಧರ್ಮ ಪರಿಪಾಲಕರನ್ನಾಗಿ ಮಾಡುವುದರಲ್ಲೇ ಪ್ರವಾದಿಗಳು ಅವಿಶ್ರಾಂತ ಪರಿಶ್ರಮಿಸಿದ್ದರು. ಈ ವಾಸ್ತವವನ್ನು ಅನೇಕ ಪ್ರವಾದಿಗಳ ಚಾರಿತ್ರಿಕ ಉದಾಹರಣೆಗಳ ಮೂಲಕ ವಿಶುದ್ಧ ಕುರ್‌ಆನ್ ನಮಗೆ ಕಲಿಸಿ ಕೊಡುತ್ತದೆ.

"ನಾವು ನೂಹರನ್ನು ಅವರ ಜನಾಂಗದ ಕಡೆಗೆ ಕಳುಹಿಸಿದ್ದೆವು. (ಅವರು ಹೇಳಿದರು:) ನಿಶ್ಚಯವಾಗಿಯೂ ನಾನು ನಿಮಗೆ ಸ್ಪಷ್ಟವಾದ ಮುನ್ನೆಚ್ಚರಿಕೆ ನೀಡುವವನಾಗಿದ್ದೇನೆ. (ಏನೆಂದರೆ) ನೀವು ಅಲ್ಲಾಹನ ಹೊರತು (ಬೇರೆ ಯಾರನ್ನೂ) ಆರಾಧಿಸಬೇಡಿರಿ. ನಿಶ್ಚಯವಾಗಿಯೂ ನಿಮ್ಮ ಮೇಲೆ (ಮಹಾ) ದಿನವೊಂದರ ವೇದನಾಭರಿತ ಶಿಕ್ಷೆಯನ್ನು ನಾನು ಭಯಪಡುತ್ತೇನೆ." (11: 25, 26)

"ಮತ್ತು ಆದ್ ಗೋತ್ರದೆಡೆಗೆ ಅವರ ಸಹೋದರನಾದ ಹೂದರನ್ನು ನಾವು ನಿಯೋಗಿಸಿದೆವು. ಅವರು ಹೇಳಿದರು" "ನನ್ನ ಜನರೇ, ನೀವು ಅಲ್ಲಾಹನನ್ನು ಮಾತ್ರ ಆರಾಧಿಸಿರಿ. ಅವನ ಹೊರತು ನಿಮಗೆ ಯಾವ ಆರಾಧ್ಯನೂ ಇಲ್ಲ. ನೀವು ಸುಳ್ಳನ್ನು ಸೃಷ್ಟಿಸುವವರು ವಿನಾ (ಬೇರೇನೂ) ಅಲ್ಲ." (ಕುರ್‌ಆನ್ 11:50)

"ಸಮೂದ್ ಜನಾಂಗದ ಕಡೆಗೆ ಅವರ ಸಹೋದರ ಸಾಲಿಹರನ್ನೂ (ನಾವು ಕಳುಹಿಸಿದೆವು) ಅವರು ಹೇಳಿದರು: "ನನ್ನ ಜನರೇ ನೀವು ಅಲ್ಲಾಹನನ್ನು ಮಾತ್ರ ಆರಾಧಿಸಿರಿ. ಅವನ ಹೊರತು ನಿಮಗೆ ಯಾವ ಆರಾಧ್ಯನೂ ಇಲ್ಲ. ಅವನು ನಿಮ್ಮನ್ನು ಭೂಮಿಯಿಂದ ಸೃಷ್ಟಿಸಿದನು ಮತ್ತು ಅದರಲ್ಲಿ ನಿಮ್ಮನ್ನು ವಾಸವಾಗಿಸಿದನು. ಆದುದರಿಂದ ನೀವು ಅವನೊಡನೆ ಪಾಪ ವಿಮೋಚನೆ ಬೇಡಿರಿ ಮತ್ತು ಪಶ್ಚಾತ್ತಾಪ ಪಟ್ಟು ಅವನ ಕಡೆಗೆ ಮರಳಿರಿ. ನಿಶ್ಚಯವಾಗಿಯೂ ನನ್ನ ಪ್ರಭು (ಅತ್ಯಂತ) ಸಮೀಪಸ್ಥನೂ (ಪ್ರಾರ್ಥನೆಗೆ) ಉತ್ತರ ಕೊಡುವವನೂ ಆಗಿರುತ್ತಾನೆ". (ಕುರ್‌ಆನ್ 11:61) "ಮತ್ತು ಮದ್‌ಯನರ ಕಡೆಗೆ ಅವರ ಸಹೋದರ ಶುಐಬ್‌ರನ್ನು (ನಾವು ಕಳುಹಿಸಿದೆವು) ಅವರು ಹೇಳಿದರು: ನನ್ನ ಜನರೇ, ನೀವು ಅಲ್ಲಾಹನನ್ನು ಮಾತ್ರ ಆರಾಧಿಸಿರಿ. ಅವನ ಹೊರತು ನಿಮಗೆ ಯಾವ ಆರಾಧ್ಯನೂ ಇಲ್ಲ. ನೀವು ಅಳತೆ ಮತ್ತು ತೂಕದಲ್ಲಿ ಕಡಿಮೆ ಮಾಡಬೇಡಿರಿ. ನಿಶ್ಚಯವಾಗಿಯೂ ನಾನು ನಿಮ್ಮನ್ನು (ಇಂದು) ಕ್ಷೇಮದಲ್ಲಾಗಿ ಕಾಣುತ್ತಿದ್ದೇನೆ. (ಆದರೆ ನಾಳೆ) ಖಂಡಿತವಾಗಿಯೂ ನಿಮ್ಮ ಮೇಲೆ (ನಿಮ್ಮನ್ನು) ಆವರಿಸಲಿರುವ ದಿನವೊಂದರ ಶಿಕ್ಷೆಯ ಕುರಿತು ನಾನು ಭಯಪಡುತ್ತೇನೆ." (ಕುರ್‌ಆನ್ 11:84)

ಮಹಾನ್ ಪ್ರವಾದಿ ಯೇಸುಕ್ರಿಸ್ತರು ತನ್ನ ಜನರಿಗೆ ಪ್ರಥಮವಾಗಿ ನೀಡಿದ ಸದುಪದೇಶ ಬೈಬಲ್‌ನಲ್ಲಿ ಈ ರೀತಿಯಾಗಿ ಕಾಣಬಹುದಾಗಿದೆ: "ಓ ಇಸ್ರಾಯೀಲ್ ಕೇಳು. ನಮ್ಮ ದೇವನಾದ ಕರ್ತನು ಏಕೈಕ ಕರ್ತನಾಗಿದ್ದಾನೆ. ನಿನ್ನ ದೇವನಾದ ಕರ್ತನನ್ನು ಪೂರ್ಣ ಹೃದಯದೊಂದಿಗೆ, ಪೂರ್ಣ ಆತ್ಮದೊಂದಿಗೆ, ಪೂರ್ಣ ಮನಸ್ಸಿನೊಂದಿಗೆ ಮತ್ತು ಪೂರ್ಣ ಶಕ್ತಿಯೊಂದಿಗೆ ಪ್ರೀತಿಸು." (ಮಾರ್ಕೋಸ್ 12:29, 30) ಇದನ್ನೇ ಈಸಾ(ಅ) ಹೇಳಿದ್ದಾಗಿ ಕುರ್‌ಆನಿನಲ್ಲಿ ಈ ರೀತಿ ಪ್ರಸ್ತಾಪಿಸಲಾಗಿದೆ:

"ಖಂಡಿತವಾಗಿಯೂ ಅಲ್ಲಾಹು ನನ್ನ ಪ್ರಭುವೂ ನಿಮ್ಮ ಪ್ರಭುವೂ ಆಗಿದ್ದಾನೆ. ಆದುದರಿಂದ ಅವನನ್ನು ನೀವು ಆರಾಧಿಸಿರಿ. ಇದು ನೇರವಾದ ಮಾರ್ಗವಾಗಿದೆ." (ಕುರ್‌ಆನ್ 3:51) ಅಂತಿಮ ಪ್ರವಾದಿ ಮುಹಮ್ಮದ್(ಸ)ರ ಚರಿತ್ರೆಯು ಕೂಡಾ ಇದಕ್ಕಿಂತ ಭಿನ್ನವಲ್ಲ. ಮಾನವನನ್ನು ಸನ್ಮಾರ್ಗದೆಡೆಗೆ ಮುನ್ನಡೆಸಲಿಕ್ಕಾಗಿ ಜಗತ್ತಿಗೆ ಬಂದ ಸಂದೇಶವಾಹಕರೆಲ್ಲರೂ ಹಿಂಸಾತ್ಮಕ ಪೀಡನೆಗಳಿಗೆ ಗುರಿಯಾಗಿದ್ದರು. ಆ ಪೀಡನೆಗಳನ್ನು ಸಹಿಸಿಯೂ ಅವರು ಮೊಳಗಿಸಿದ್ದು ಪವಿತ್ರ ತೌಹೀದ್‌ನ ವಚನವಾಗಿತ್ತು.

## ಸತ್ಯವಿಶ್ವಾಸಿಯ ಕರ್ತವ್ಯ:

ಅಲ್ಲಾಹು ಭೂಮಿಗೆ ನಿಯೋಗಿಸಿದ ಸಂದೇಶವಾಹಕರೆಲ್ಲರೂ ಬೋಧಿಸಿದ ಇಸ್ಲಾಮ್ ಧರ್ಮವು ಅಂತಿಮ ಪ್ರವಾದಿ ಮುಹಮ್ಮದ್(ಸ)ರ ಮೂಲಕ ಪೂರ್ತೀಕರಿಸಲ್ಪಟ್ಟಿತು. ಅಲ್ಲಾಹನ ಆ ಘೋಷಣೆಯನ್ನು ವಿಶುದ್ಧ ಕುರ್‌ಆನ್ ನಮಗೆ ಕಲಿಸಿ ಕೊಡುತ್ತದೆ. "ಇಂದು ನಾನು ನಿಮಗೆ ನಿಮ್ಮ ಧರ್ಮವನ್ನು ಪರಿಪೂರ್ಣಗೊಳಿಸಿ ಕೊಟ್ಟಿರುತ್ತೇನೆ ಮತ್ತು ಇಸ್ಲಾಮನ್ನು ನಾನು ನಿಮಗೆ ಧರ್ಮವಾಗಿ ತೃಪ್ತಿಪಟ್ಟಿದ್ದೇನೆ". (ಕುರ್‌ಆನ್ 5:3) ಅಲ್ಲಾಹು ಪೂರ್ಣಗೊಳಿಸಿದ ಈ ಧರ್ಮದಲ್ಲಿ ಇನ್ನು ಯಾರೂ ಏನನ್ನೂ ಸೇರ್ಪಡೆಗೊಳಿಸಲಾಗುವುದಿಲ್ಲವೆಂಬುದು ಸ್ಪಷ್ಟ. ತನ್ನ ದೌತ್ಯ ಪೂರ್ತೀಕರಣದ ಕೊನೆಯ ದಿನಗಳಲ್ಲಿ ಲಕ್ಷಕ್ಕೂ ಮೇಲ್ಪಟ್ಟ ಅನುಯಾಯಿಗಳನ್ನು ಸಾಕ್ಷಿಯಾಗಿಸಿ ಪ್ರವಾದಿ(ಅ)ರು ಈ ಸೂಕ್ತವನ್ನು ಘೋಷಿಸುತ್ತಾರೆ. ಅದರೊಂದಿಗೆ ಅವರು ಹೇಳುತ್ತಾರೆ: "ಎರಡು ವಿಷಯಗಳನ್ನು ನಾನು ನಿಮಗೆ ಬಿಟ್ಟು ಹೋಗುತ್ತಿದ್ದೇನೆ. ಅವುಗಳನ್ನು ನೀವು ಬಿಗಿಯಾಗಿ ಹಿಡಿದಿರುವ ತನಕ ನೀವು ದಾರಿ ತಪ್ಪಲಾರಿರಿ. ಅವುಗಳೆಂದರೆ ಪವಿತ್ರ ಕುರ್‌ಆನ್ ಮತ್ತು ಸುನ್ನತ್‌ಗಳಾಗಿವೆ. ಕೊನೆಯಲ್ಲಿ ಅವರು "ಇಲ್ಲಿ ಹಾಜರಿರುವವರು ಈ ಸಂದೇಶದ ಕುರಿತು ತಿಳಿದಿರದವರಿಗೆ ತಲುಪಿಸಿ ಕೊಡಬೇಕು" ಎಂಬ ಅತಿ ಮಹತ್ವದ ವಿಷಯವೊಂದನ್ನು ತನ್ನ ಅನುಯಾಯಿಗಳಿಗೆ ನೆನಪಿಸಿದರು.

ಸತ್ಯ ಮನವರಿಗೆಯಾದವರು ಅದರ ಪ್ರಚಾರಕರಾಗಬೇಕೆಂದು ಕುರ್‌ಆನ್ ಪುನರಾವರ್ತಿಸಿ ಹೇಳಿದೆ: "ಅಲ್ಲಾಹನ ಕಡೆಗೆ ಆಹ್ವಾನಿಸಿದ, ಸತ್ಕರ್ಮವೆಸಗಿದ ಮತ್ತು ನಿಶ್ಚಯವಾಗಿಯೂ ನಾನು ಮುಸ್ಲಿಮರಲ್ಲಿ ಸೇರಿದವನಾಗಿದ್ದೇನೆ ಎಂದು ಹೇಳಿದವನಿಗಿಂತ ಉತ್ತಮವಾದ ಮಾತನ್ನು ಹೇಳಿದವನು ಯಾರಿದ್ದಾನೆ?" ( ಕುರ್‌ಆನ್ 41:33)

ಇನ್ನೊಂದೆಡೆ ಕುರ್‌ಆನ್ ಹೀಗೆ ಆದೇಶಿಸುತ್ತದೆ: (ಪ್ರವಾದಿಯವರೇ) ನೀವು ವಿವೇಕ ಹಾಗೂ ಸದುಪದೇಶದ ಮೂಲಕ ನಿಮ್ಮ ಪ್ರಭುವಿನ ಮಾರ್ಗದ ಕಡೆಗೆ (ಜನರನ್ನು) ಆಹ್ವಾನಿಸಿರಿ ಮತ್ತು ಅವರೊಂದಿಗೆ ವಾಗ್ವಾದ ಮಾಡಿರಿ. ನಿಶ್ಚಯವಾಗಿಯೂ ನಿಮ್ಮ ಪ್ರಭು ತನ್ನ ಮಾರ್ಗವನ್ನು ಬಿಟ್ಟು ಭ್ರಷ್ಟನಾಗುವವನ ಕುರಿತು ಚೆನ್ನಾಗಿ ಬಲ್ಲನು ಮತ್ತು ನೇರಮಾರ್ಗ ಪಡೆಯುವವನ ಕುರಿತೂ ಅವನು ಚೆನ್ನಾಗಿ ಬಲ್ಲನು." (ಕುರ್‌ಆನ್ 16:125)

ಸಂದೇಶ ಪ್ರಚಾರವು ಸತ್ಯವಿಶ್ವಾಸಿಯ ಬಾಧ್ಯತೆಯಾಗಿದೆಯೆಂದು ನೆನಪಿಸಿದ ಪ್ರವಾದಿ(ಸ)ರು ಪ್ರತಿಯೊಬ್ಬ ಸಂದೇಶಪ್ರಚಾರಕರಿಗೂ ಅಲ್ಲಾಹನ ಸನ್ನಿಧಿಯಲ್ಲಿರುವ ಮಹತ್ತರ ಪದವಿ ಮತ್ತು ಪ್ರತಿಫಲಗಳ ಕುರಿತು ಶುಭ ಸುದ್ದಿಯನ್ನು ತಿಳಿಸಿರುತ್ತಾರೆ: "ಅಲ್ಲಾಹನಾಣೆ ಸತ್ಯ, ನಿನ್ನಿಂದಾಗಿ ಒಬ್ಬರು ಸನ್ಮಾರ್ಗವನ್ನು ಪಡೆಯುವುದಾದರೆ ಅದು ನಿನಗೆ ಕೆಂಪು ಒಂಟೆಗಿಂತಲೂ ಉತ್ತಮವಾಗಿದೆ". (ಬುಖಾರಿ)

ಇನ್ನೊಂದು ವರದಿಯಲ್ಲಿ "ನಿನ್ನಿಂದಾಗಿ ಒಬ್ಬರು ಸತ್ಯದ ಹಾದಿ ಸ್ವೀಕರಿಸುವುದಾದರೆ ಅದು ನಿನಗೆ ಭೂಲೋಕ ಮತ್ತು ಅದರಲ್ಲಿರುವ ಸಕಲ ಸಂಪತ್ತುಗಳಿಗಿಂತಲೂ ಉತ್ತಮ" ಎಂದು ಪ್ರವಾದಿ(ಸ)ರು ಹೇಳಿದ್ದಾರೆ.

ಪವಿತ್ರ ಕುರ್‌ಆನಿನ ಸಂದೇಶಗಳು ಮತ್ತು ಪ್ರವಾದಿ(ಸ)ರ ಸಾರೋಪದೇಶಗಳಿಂದ ಪ್ರೇರಿತರಾದ ಸಹಾಬಿಗಳು ಸತ್ಯ ಧರ್ಮದ ಪ್ರಚಾರಕ್ಕಾಗಿ ಜಗತ್ತಿನ ನಾನಾ ಕಡೆಗಳಿಗೆ ತೆರಳಿ ಇಸ್ಲಾಮಿನ ಪ್ರಜ್ವಲ ಪ್ರಭಾಕಿರಣಗಳನ್ನು ಅಸಂಖ್ಯಾತ ಹೃದಯಗಳಿಗೆ ತಲುಪಿಸಿದರು. ಒಂದೊಂದೇ ತಲೆಮಾರುಗಳು ಗತಿಸಿದಂತೆಯೇ ಪ್ರಪಂಚದ ವಿವಿಧೆಡೆಗಳಲ್ಲಿ ಸಂದೇಶ ಪ್ರಚಾರಕರು ಈ ಕರ್ತವ್ಯ ನಿರ್ವಹಿಸಿದರು. ಈ ಹೊಣೆಗಾರಿಕೆಯನ್ನು ನಿರ್ವಹಿಸಲಿಕ್ಕಾಗಿ ಒಂದು ಸಮೂಹ ಎಲ್ಲಾ ಕಾಲಗಳಲ್ಲೂ ಇರಬೇಕೆಂದು ಪವಿತ್ರ ಕುರ್‌ಆನ್ ಪ್ರಸ್ತಾಪಿಸಿದೆ.

"(ಸತ್ಯವಿಶ್ವಾಸಿಗಳೇ) ಒಳಿತಿನೆಡೆಗೆ ಆಹ್ವಾನಿಸುವ,

(ಶೇಷ ಪುಟಕ್ಕೆ)




✍ ಪ್ರೊ ಪಿ. ಅಬ್ದುಲ್ಲ. ಕನ್ನಡಕ್ಕೆ: ಇಬ್‌ನು ಮೊಹಿದ್ದೀನ್

## ರೋಗ ಬಂದರೆ

وعَنْ عَائِشَةَ رضي الله عنها أنَّ النَّبِي ﷺ كَانَ يُعَوِّذُ، بَعْضَ أهْلِهِ يَمْسَحُ بِيَدِهِ الْيُمْنَى وَيَقُولُ: (اللَّهُمَّ رَبَّ النَّاسِ، أذْهِبِ الْبَاسَ، وَاشْفِ أنْتَ الشَّافِي لاَ شِفَاءَ إلاَّ شِفَاؤُكَ، شِفَاءً لاَ يُغَادِرُ سَقَمًا) (البخاري ومسلم)

ಆಯಿಶಾ(ರ)ರಿಂದ ವರದಿ: "ಪ್ರವಾದಿ(ಸ)ರು (ರೋಗಿಗಳಾದ) ತನ್ನ ಕೆಲವು ಬಂಧುಗಳ ಮೈಯನ್ನು ಬಲಗೈಯಲ್ಲಿ ತಡವಿ ಹೀಗೆ ರಕ್ಷಣೆ ಕೋರುತ್ತಿದ್ದರು:. ಜನರ ಪ್ರಭುವಾದ ಅಲ್ಲಾಹ್, ನೀನು ಉಪದ್ರವಗಳನ್ನು ನೀಗಿಸು ಮತ್ತು ರೋಗ ಶಮನ ನೀಡು. ರೋಗ ಶಮನ ನೀಡುವವನು ನೀನೇ. ನೀನು ನೀಡುವ ರೋಗ ಶಮನವಲ್ಲದೆ ಬೇರಾವ ರೋಗ ಶಮನವೂ ಇಲ್ಲ. ಯಾವ ಅಸೌಖ್ಯವೂ ಉಳಿಯದಂತಹ ರೋಗ ಶಮನ." (ಬುಖಾರಿ, ಮುಸ್ಲಿಮ್)

وعَنْ عُثْمَانَ بْنِ أبِي الْعَاصِ أنَّهُ شَكَا إلَى رَسُولُ اللهِ ﷺ وَجَعًا يَجِدُهُ فِي جَسَدِهِ مُنْذُ أسْلَمَ، فَقَالَ رَسُولُ اللهِ ﷺ ضَعْ يَدَكَ عَلَى الَّذِي يَألَمُ مِنْ جَسَدِكَ وَقُلْ (بِسْمِ اللهِ) ثَلاَثًا، وَقُلْ سَبْعَ مَرَّاتٍ: (أعُوذُ بِعِزَّةِ اللهِ وَقُدْرَتِهِ مِنْ شَرِّ مَا أجِدُ وَأحَاذِرُ)(مسلم)

ಉಸ್ಮಾನಿಬ್‌ನು ಅಬಿಲ್‌ಆಸ್(ರ)ರಿಂದ ವರದಿ: "ನಾನು ಇಸ್ಲಾಮ್ ಸ್ವೀಕರಿಸಿದಂದಿನಿಂದ ನನ್ನ ದೇಹದಲ್ಲಿದ್ದ ಒಂದು ನೋವಿನ ಬಗ್ಗೆ ಪ್ರವಾದಿ(ಸ)ರಲ್ಲಿ ನಿವೇದಿಸಿದೆ. ಆಗ ರಸೂಲ್(ಸ)ರು (ಹೀಗೆ) ಹೇಳಿಕೊಟ್ಟರು: ತಮ್ಮ ದೇಹದಲ್ಲಿ ನೋವಿರುವ ಭಾಗದಲ್ಲಿ ತಮ್ಮ ಕೈಯನ್ನಿಟ್ಟು ಹೀಗೆ ಹೇಳಿರಿ - ಬಿಸ್ಮಿಲ್ಲಾಹಿ ಎಂದು ಮೂರು ಬಾರಿ, ನಾನು ಅನುಭವಿಸುತ್ತಿರುವ ಮತ್ತು ಭಯ ಪಡುತ್ತಿರುವುದರ ಕೇಡಿನಿಂದ ನಾನು ಅಲ್ಲಾಹನ ಪ್ರತಾಪ ಹಾಗೂ ಶಕ್ತಿಯಲ್ಲಿ ರಕ್ಷಣೆ ಕೋರುತ್ತೇನೆ ಎಂದು ಏಳು ಬಾರಿ". (ಮುಸ್ಲಿಮ್)

عن النَّبِي ﷺ قَالَ : مَنْ عَادَ مَرِيضًا لَمْ يَحْضُرْ أجَلُهُ فَقَالَ عِنْدَهُ سَبْعَ مَرَّاتٍ: (أسْألُ اللهَ الْعَظِيمَ رَبَّ الْعَرْشِ الْعَظِيمِ أنْ يَشْفِيكَ) إلاَّ عَافَاهُ اللهُ (ابوداود والترمذي)

ಪ್ರವಾದಿ(ಸ)ರು ಹೇಳಿದರು: "ಮರಣವು ಆಸನ್ನವಾಗಿರದ ಒಬ್ಬ ರೋಗಿಯನ್ನು ಸಂದರ್ಶಿಸಿ ಆತನ ಬಳಿಯಲ್ಲಿರುವಾಗ ಮಹಾನನೂ ಮಹತ್ತರವಾದ ದಿವ್ಯ ಪೀಠದ ಒಡೆಯನೂ ಆದ ಅಲ್ಲಾಹನೊಂದಿಗೆ ನಿನಗೆ ರೋಗ ಶಮನ ನೀಡಲು ನಾನು ಬೇಡುತ್ತೇನೆ ಎಂದು ಏಳು ಬಾರಿ ಹೇಳಿದರೆ ಅಲ್ಲಾಹು ಆತನಿಗೆ ರೋಗಶಮನ ನೀಡುವನು". (ಅಬೂದಾವೂದ್, ತುರ್ಮುದಿ)

## ಅನುಗ್ರಹ

قَالَ اللهُ تَعَالَى فِي قِصَّةِ الرَّجُلَيْنِ:
وَلَوْلَآ إِذْ دَخَلْتَ جَنَّتَكَ قُلْتَ مَا شَآءَ ٱللَّهُ لَا قُوَّةَ إِلَّا بِٱللَّهِ

ಅತ್ಯುನ್ನತನಾದ ಅಲ್ಲಾಹು ಇಬ್ಬರು ವ್ಯಕ್ತಿಗಳ ಕಥೆಯಲ್ಲಿ ಹೀಗೆ ಹೇಳುತ್ತಾನೆ: "ನೀನು ತೋಟಕ್ಕೆ ಪ್ರವೇಶಿಸುವಾಗ (ಇವೆಲ್ಲಾ) ಅಲ್ಲಾಹನಿಚ್ಛಿಸಿದ್ದಾಗಿದೆ. ಅಲ್ಲಾಹನಿಂದ ಹೊರತು (ಯಾರಿಗೂ) ಯಾವ ಶಕ್ತಿಯೂ ಇಲ್ಲ ಎಂದು ನಿನಗೆ ಹೇಳಬಾರದಿತ್ತೇ? (ಕುರ್‌ಆನ್ 18:39)

وعَنِ النَّبِيِّ ﷺ أنَّهُ كَانَ إذَا رَأيَ مَا يَسُرُّهُ قَالَ: (الْحَمْدُ للهِ الَّذِي بِنِعْمَتِهِ تَتِمُّ الصَّالِحَاتُ) وَإذَا رَأيَ مَايَسُوؤُهُ قَالَ: (الْحَمْدُ للهِ عَلَى كُلِّ حَالٍ) (ابن ماجه)

ಸಂತೋಷಗೊಳಿಸುವ ಏನನ್ನಾದರೂ ಕಂಡರೆ ಪ್ರವಾದಿ(ಸ)ರು ಹೀಗೆ ಹೇಳುತ್ತಿದ್ದರು: "ಸರ್ವ ಸ್ತುತಿಗಳು ಅಲ್ಲಾಹನಿಗೆ, ಸಕಲ ಕಾರ್ಯಗಳು ಸಫಲೀಕರಿಸಲ್ಪಡುವುದು ಅವನ ಅನುಗ್ರಹದ ಮೂಲಕವಾಗಿದೆ. ದ್ವೇಷ ಉಂಟಾಗುವಂತಹ ಯಾವುದಾದರೂ ಕಾರ್ಯವನ್ನು ಕಂಡರೆ ಅವರು ಈ ರೀತಿ ಹೇಳುತ್ತಿದ್ದರು. ಎಲ್ಲಾ ಸ್ಥಿತಿಯಲ್ಲೂ ಸರ್ವ ಸ್ತುತಿಗಳು ಅಲ್ಲಾಹನಿಗೇ." (ಇಬ್‌ನುಮಾಜ)

# ಇಸ್ಲಾಮೀ ಸಂದೇಶ ಪ್ರಚಾರದ ಪ್ರವಾದಿ ಮಾದರಿ

(5ನೇ ಪುಟದಿಂದ)

ಒಳಿತಿನೆಡೆಗೆ ಆಹ್ವಾನಿಸುವ, ಸದಾಚಾರಕ್ಕಾಗಿ ಆಜ್ಞಾಪಿಸುವ ಮತ್ತು ದುರಾಚಾರದ ಕುರಿತು ವಿರೋಧಿಸುವ ಸಮೂಹವೊಂದು ನಿಮ್ಮಲ್ಲಿರಲಿ. ಅವರೇ ವಿಜಯಿಗಳು." (ಕುರ್‌ಆನ್ 3:104)

ಮೇಲೆ ಉಲ್ಲೇಖಿಸಿದ ಕುರ್‌ಆನ್ ಹಾಗೂ ಹದೀಸ್‌ಗಳು ಸಂದೇಶಪ್ರಚಾರ ದೌತ್ಯವು ಸತ್ಯ ವಿಶ್ವಾಸಿಗಳ ಬಾಧ್ಯತೆಯಾಗಿದೆಯೆಂಬುದನ್ನು ಕರೆದು ಹೇಳುತ್ತದೆ.

**ಪ್ರವಾದಿ(ಸ)ರ ಮಾದರಿ ಅನಿವಾರ್ಯ:**

ಇತರೆಲ್ಲಾ ಧಾರ್ಮಿಕ ವಿಷಯಗಳ ಹಾಗೆಯೇ ಸಂದೇಶಪ್ರಚಾರ ರಂಗದಲ್ಲೂ ಪ್ರವಾದಿ(ಸ)ರ ಮಾದರಿಯನ್ನೇ ಸತ್ಯವಿಶ್ವಾಸಿಗಳು ಅನುಸರಿಸಬೇಕಾಗಿದೆ. ಈ ಕುರಿತು ಕುರ್‌ಆನ್ ನಮ್ಮ ಗಮನ ಸೆಳೆಯುತ್ತದೆ:

ಖಂಡಿತವಾಗಿಯೂ ನಿಮಗೆ ಅಲ್ಲಾಹನ ಸಂದೇಶವಾಹಕರಲ್ಲಿ ಉತ್ತಮವಾದ ಮಾದರಿಯಿದೆ. ಅಂದರೆ ಅಲ್ಲಾಹನನ್ನೂ ಅಂತ್ಯದಿನವನ್ನೂ ನಿರೀಕ್ಷಿಸುತ್ತಿರುವವರಿಗೆ ಮತ್ತು ಅಲ್ಲಾಹನನ್ನು ಧಾರಾಳವಾಗಿ ಸ್ಮರಿಸುತ್ತಿರುವವರಿಗೆ". (ಕುರ್‌ಆನ್ 33:21)

ಪ್ರವಾದಿ(ಸ)ರ ಜೀವನ ಮಾದರಿಗಳು ಇತಿಹಾಸದ ಸುವರ್ಣ ಅಧ್ಯಾಯಗಳಾಗಿವೆ. ಅವರ ಸಂದೇಶಪ್ರಚಾರ ರೀತಿ ಎಲ್ಲಾ ಕಾಲಗಳಲ್ಲೂ ಅನುಕರಣೀಯವಾಗಿದೆ. ಸಮುದಾಯದ ಆರಾಧನಾ ಕ್ರಮದ ಅವಿಭಾಜ್ಯ ಅಂಗವಾಗಿದ್ದ ವಿಗ್ರಹಗಳನ್ನೂ ದೇವೇತರ ಆರಾಧ್ಯ ವಸ್ತುಗಳನ್ನೂ ತೊರೆದು ಏಕೈಕನಾದ ಅಲ್ಲಾಹನನ್ನು ಮಾತ್ರ ಆರಾಧಿಸುವುದರ ಕಡೆಗೆ ಅರ್ಥಾತ್ ತೌಹೀದ್‌ನೆಡೆಗೆ ಅವರು ಸಮುದಾಯವನ್ನು ಆಹ್ವಾನಿಸಿದರು. ಹಿತಾಕಾಂಕ್ಷೆಯ ಅವರ ಸಾರೋಪದೇಶಗಳು ಚಿಂತಿಸುವ ಹೃದಯಗಳಲ್ಲಿ ಪರಿವರ್ತನೆಯ ಪ್ರತಿಧ್ವನಿ ಮೊಳಗಿಸಿದವು. ಸರ್ವ ಪ್ರಥಮವಾಗಿ ಅವರು ಬೋಧಿಸಿದ ವಿಷಯ ತೌಹೀದ್ ಆಗಿತ್ತು, ಅದರೊಂದಿಗೇ ಮರಣಾನಂತರ ಜೀವನದ ಕುರಿತು ತಾಕೀತು ನೀಡಿದರು. ಸತ್ಕರ್ಮಿಗಳಿಗೆ ಸ್ವರ್ಗವಿದೆಯೆಂಬ ಶುಭ ಸುದ್ದಿಯನ್ನು ತಿಳಿಸಿದರು. ಕುರ್‌ಆನ್ ಹೇಳುತ್ತದೆ: "(ನಾವು ಅವರನ್ನು) ಶುಭವಾರ್ತೆ ತಿಳಿಸುವ ಮತ್ತು ಮುನ್ನೆಚ್ಚರಿಕೆ ನೀಡುವ ಸಂದೇಶವಾಹಕರಾಗಿ ಕಳುಹಿಸಿದ್ದೆವು. (ಇವೆಲ್ಲಾ) ಸಂದೇಶವಾಹಕರ(ನಿಯೋಜನೆಯ) ಬಳಿಕ ಅಲ್ಲಾಹನಿಗೆದುರಾಗಿ (ಹೇಳಲು) ಜನರಲ್ಲಿ ಯಾವ ವಾದವೂ ಇಲ್ಲದಂತಾಗಲಿಕ್ಕಾಗಿದೆ. ಅಲ್ಲಾಹು ಪ್ರತಾಪಶಾಲಿಯೂ ವಿವೇಕಪೂರ್ಣನೂ ಆಗಿದ್ದಾನೆ." (ಕುರ್‌ಆನ್ 4:165)

ಪ್ರವಾದಿ ಮುಹಮ್ಮದ್(ಸ)ರು ಮಾತ್ರವಲ್ಲ ಅವರಿಗಿಂತ ಮುಂಚಿನ ಸಕಲ ಪ್ರವಾದಿಗಳು ಪ್ರಥಮವಾಗಿ ಪ್ರಯತ್ನಿಸಿದ್ದು ಜನರ ವಿಶ್ವಾಸದ ಪರಿವರ್ತನೆಗಾಗಿತ್ತು. ತಮ್ಮ ಆರಾಧ್ಯರನ್ನು ತಿರಸ್ಕರಿಸಲು ಹೇಳಿದಾಗ ಶಿರ್ಕ್‌ವಾದಿಗಳಿಗೆ ಸಹಿಸಲಾಗಲಿಲ್ಲ. ಎಲ್ಲಾ ಕಾಲಘಟ್ಟಗಳಲ್ಲೂ ಅವರು ತೌಹೀದ್‌ನ ವಕ್ತಾರರ ವಿರುದ್ಧ ಶಿಕ್ಷೆ ಪ್ರಯೋಗಿಸಿದ್ದರು. 'ಲಾಇಲಾಹ ಇಲ್ಲಲ್ಲಾಹ್' ಎಂಬ ತೌಹೀದ್‌ನ ಶಬ್ದ ಮೊಳಗಿದಲ್ಲೆಲ್ಲಾ ನೆತ್ತರು ಹರಿದಿದೆ. ಪೀಡನೆ, ಮರ್ದನಗಳಿಗೀಡಾದ ಪ್ರವಾದಿಗಳ ಇತಿಹಾಸವನ್ನು ವಿಶುದ್ಧ ಕುರ್‌ಆನ್ ವಿವರಿಸುತ್ತದೆ. ಮಹಾನ್ ಪ್ರವಾದಿ ಇಬ್ರಾಹೀಂ(ಅ)ರವರ ಚರಿತ್ರೆ ಒಂದು ಉದಾಹರಣೆಯಾಗಿದೆ. ಅಲ್ಲಾಹನನ್ನು ಮಾತ್ರ ಆರಾಧಿಸಬೇಕು ಎಂದು ಹೇಳಿದ್ದಕ್ಕಾಗಿ ಸ್ವಂತ ಮನೆಯಿಂದ ಹೊರ ಹಾಕಲ್ಪಟ್ಟರು. ಧಿಕ್ಕಾರಿಯಾದ ನಮ್ರೂದನು ಉರಿಸಿದ ಬೃಹತ್ ಅಗ್ನಿ ಕುಂಡಕ್ಕೆ ಎಸೆಯಲ್ಪಟ್ಟರು.

ಈಸಾ(ಅ)ರನ್ನು ಶತ್ರುಗಳು ಶಿಲುಬೆಗೇರಿಸಲೆತ್ನಿಸಿದ್ದು ಅವರು ತೌಹೀದ್‌ನ ಪ್ರಚಾರಕರಾಗಿದ್ದರೆಂಬುದಕ್ಕಾಗಿದೆ. ಕುರ್‌ಆನಿನಲ್ಲಿ ಉಲ್ಲೇಖಿಸಲ್ಪಟ್ಟ ಮತ್ತು ಉಲ್ಲೇಖಿಸಲ್ಪಡದ ಇನ್ನೂ ಅನೇಕ ಸಂದೇಶವಾಹಕರು ತೌಹೀದೀ ಪ್ರಚಾರ ರಂಗದಲ್ಲಿ ಅನುಭವಿಸಿದ ಪೀಡನೆಗಳು ಹೃದಯವಿದ್ರಾವಕ ಇತಿಹಾಸವಾಗಿದೆ. ಮನೆಯಿಂದ, ಊರಿನಿಂದ ಓಡಿಸಲ್ಪಟ್ಟವರೂ ಲಿಂಗಚ್ಛೇದಗೊಳಿಸಲ್ಪಟ್ಟವರೂ ತಲೆಬುರುಡೆಯಿಂದ ಇರಿದು ಹರೀರ ಇಬ್ಭಾಗಗೊಳಿಸಲ್ಪಟ್ಟವರೂ ಕಾದ ಕಬ್ಬಿಣದ ಸಲಾಕೆಯಿಂದ ಗುಪ್ತಾಂಗಗಳಿಗೆ ಇರಿದು ವಧಿಸಲ್ಪಟ್ಟವರೂ ಆ ಯಾದಿಯಲ್ಲಿದ್ದಾರೆ.

ಇವೆಲ್ಲಾ ಪೀಡನೆ, ಯಾತನೆಗಳನ್ನು ಅನುಭವಿಸಬೇಕಾಗಿ ಬಂದರೂ ತಮ್ಮ ಸಂದೇಶ ಪ್ರಚಾರದ ಶೈಲಿಯನ್ನು ಒಂದಿಷ್ಟೂ ಬದಲಾಯಿಸಲು

(11ನೇ ಪುಟಕ್ಕೆ)

# ಧಾರ್ಮಿಕ ಪ್ರಶ್ನೋತ್ತರಂಗಳು

## ಮುಹರ್ರಮ್ ತಿಂಗಳು ಮತ್ತು ಶುಭ ಕಾರ್ಯ

**ಪ್ರ: ಮುಹರ್ರಮ್ ತಿಂಗಳಲ್ಲಿ ವಿವಾಹ, ಮುಂಜಿ, ಗೃಹ ಪ್ರವೇಶ ಮುಂತಾದ ಶುಭ ಕಾರ್ಯಗಳನ್ನು ಮಾಡಬಾರದು ಎಂದು ಕೆಲವರು ಹೇಳುತ್ತಾರೆ, ಇದು ನಿಜವೇ?**

ಉ: ಇಸ್ಲಾಮಿಕ್ ಕ್ಯಾಲೆಂಡರ್‌ನ ಪ್ರಥಮ ತಿಂಗಳೇ ಮುಹರ್ರಮ್. ಇದರ ಮಹತ್ವವನ್ನು ಪ್ರವಾದಿ(ಸ)ರವರು ನಮಗೆ ಕಲಿಸಿ ಕೊಟ್ಟಿದ್ದಾರೆ. ಮುಹರ್ರಮ್ 9, 10 ಇತ್ಯಾದಿ ದಿನಗಳಲ್ಲಿ ವ್ರತಾಚರಿಸುವುದು ಸುನ್ನತ್. ಸ್ವತಃ ಪ್ರವಾದಿ(ಸ)ರವರೇ ವ್ರತಾಚರಿಸಿ ನಮಗೆ ಮಾದರಿ ತೋರಿದ್ದಾರೆ.

ಅಲಿ(ರ)ರವರ ಪುತ್ರ ಹುಸೈನ್(ರ)ರವರು ಹುತಾತ್ಮರಾದುದು ಮುಹರ್ರಮ್ ತಿಂಗಳಲ್ಲೇ. ಈಗಲೂ ಕೆಲವರು ಹಝ್ರತ್ ಹುಸೈನ್(ರ)ರವರ ವೀರ ಮೃತ್ಯುವಿನ ಸನ್ನಿವೇಶಗಳನ್ನು ಮೆಲುಕು ಹಾಕಿಕೊಂಡು ಮುಹರ್ರಮ್ ತಿಂಗಳಿಗೆ ವಿಶೇಷ ಮಹತ್ವ ಕಲ್ಪಿಸುತ್ತಿರುವುದು ಮಾತ್ರ ದುರದೃಷ್ಟಕರ.

ಭಾರತದ ಉಪ ಖಂಡದ ಜನರು ವಿಶೇಷವಾಗಿ ಶಿಯಾಗಳು ಮುಹರ್ರಮ್ ತಿಂಗಳಲ್ಲಿ ಯಾವುದೇ ಶುಭ ಕಾರ್ಯಗಳನ್ನೂ ನಿರ್ವಹಿಸದಿರುವುದಕ್ಕೆ ಆ ತಿಂಗಳನ್ನು ದುಃಖ ಹಾಗೂ ಶೋಕಾಚರಣೆಯ ಸಂದರ್ಭವಾಗಿ ಪರಿಗಣಿಸಿರುವುದೇ ಮುಖ್ಯ ಕಾರಣ. ಹುಸೈನ್(ರ)ರವರ ಹುತಾತ್ಮದ ದಿನವನ್ನು ನೆನೆದು ತಾವು ಪ್ರವಾದಿ(ಸ)ರವರ ಕುಟುಂಬಕ್ಕೆ ಅನುಕಂಪ ವ್ಯಕ್ತಪಡಿಸುತ್ತಿರುವುದಾಗಿ ಕೆಲವರು ಹೇಳುತ್ತಾರೆ. ಇಸ್ಲಾಮಿ ಶರೀಅತ್ ಈ ವಾದವನ್ನು ತಿರಸ್ಕರಿಸುತ್ತದೆ. ಏಕೆಂದರೆ ಮೃತನಿಗಾಗಿ ಕೇವಲ ಮೂರು ದಿನಗಳ ಕಾಲ ಮಾತ್ರ ದುಃಖ ವ್ಯಕ್ತಪಡಿಸಲು ಇಸ್ಲಾಮ್ ಅನುಮತಿಸಿದೆ. ಪತಿ ತೀರಿ ಹೋದ ಪತ್ನಿಗೆ ಮಾತ್ರ ನಾಲ್ಕು ತಿಂಗಳು ಮತ್ತು ಹತ್ತು ದಿನಗಳ ಹೆಚ್ಚುವರಿ ಅವಧಿ ಶೋಕಾಚರಿಸುವ ಅವಕಾಶವನ್ನು ಇಸ್ಲಾಮ್ ನೀಡಿದೆ. ಹೀಗಿರುವಾಗ ಹಝ್ರತ್ ಹುಸೈನ್(ರ)ರವರು ತೀರಿ ಹೋಗಿ ಸಹಸ್ರಾರು ವರ್ಷಗಳೇ ಸರಿದು ಹೋಗಿದ್ದರೂ ಈಗಲೂ ಶೋಕಾಚರಿಸುವುದಕ್ಕೆ ಇಸ್ಲಾಮಿನಲ್ಲಿ ಅವಕಾಶವಿಲ್ಲ.

ಸಜ್ಜನ ವ್ಯಕ್ತಿಯೊಬ್ಬರ ಮರಣ ಸ್ಮರಣೆಯನ್ನು ಜೀವಂತಗೊಳಿಸಲಿಕ್ಕಾಗಿ ಜನರು ಒಂದೆಡೆ ಒಗ್ಗೂಡುವುದು ಒಳ್ಳೆಯ ಕಾರ್ಯವಾಗಿರುತ್ತಿದ್ದಲ್ಲಿ ಖಂಡಿತವಾಗಿಯೂ ಪ್ರವಾದಿ(ಸ)ರವರು ನಮಗದನ್ನು ಕಲಿಸಿ ಕೊಡುತ್ತಿದ್ದರು.

ಪ್ರವಾದಿ(ಸ)ರವರ ಜೀವಿತ ಕಾಲದಲ್ಲೇ ಅನೇಕ ಸಹಾಬಿಗಳು ಇಹಲೋಕ ತ್ಯಜಿಸಿದ್ದಾರೆ. ಅವರ ಪೈಕಿ ಅನೇಕರು ರಣಾಂಗಣಕ್ಕೆ ಧುಮುಕಿ ಹುತಾತ್ಮರಾದವರಿದ್ದಾರೆ. ಉಹ್ದ್ ಯುದ್ಧದಲ್ಲಿ ತೌಹೀದ್‌ನ ಪ್ರತಿಷ್ಠಾಪನೆಗಾಗಿ ವೀರ ಮರಣವನ್ನಪ್ಪಿದ ಹಂಝ(ರ) ಮಾತ್ರವಲ್ಲ, ಒಮ್ಮೆ ಕುರ್‌ಆನ್ ಹಿಫ್ಳ್ ಮಾಡಿದ 70 ಮಂದಿ ಸಹಾಬಿ ವಿದ್ವಾಂಸರು ಶತ್ರುಗಳಿಂದ ಹತರಾದ ಸಂದರ್ಭವೂ ನಡೆದಿದೆ. ಆದರೆ ಪ್ರವಾದಿ(ಸ)ರವರು ಇವರ ಪೈಕಿ ಯಾರದೇ ಮರಣ ಸ್ಮರಣೆಗಾಗಿ ಸಮಾವೇಶ ಏರ್ಪಡಿಸಿದ ಅಥವಾ ಹಾಗೆ ಮಾಡುವಂತೆ ಆದೇಶಿಸಿದ ಚರಿತ್ರೆ ಇಲ್ಲ. ಸ್ವತಃ ಪ್ರವಾದಿ(ಸ)ರವರ ಮರಣವೇ ನಮಗೆ ದೊಡ್ಡ ನಷ್ಟವಾಗಿದ್ದರೂ ಅದಕ್ಕಾಗಿ ರಬೀಉಲ್ ಅವ್ವಲ್ ತಿಂಗಳಲ್ಲಿ ಪ್ರತ್ಯೇಕ ಅನುಸ್ಮರಣೆ ನಡೆಸಲೂ ಇಸ್ಲಾಮ್ ಅನುಮತಿಸುವುದಿಲ್ಲ ಎನ್ನುವುದನ್ನು ಅರ್ಥ ಮಾಡಿಕೊಂಡರೆ ಮುಹರ್ರಮ್ ಕೂಡಾ ಇದರಿಂದ ಹೊರತಲ್ಲ ಎಂದು ತಿಳಿಯಬಹುದು.

**-ಶೈಖ್ ಮಹ್‌ಮೂದ್ ಅಹ್ಮದ್, ಕಾಶ್ಮೀರಿ**

## ಅನರಬಿ ಭಾಷೆಯಲ್ಲಿ ನಾಮಕರಣ

**ಪ್ರ: ಮಗುವಿಗೆ ನಾಮಕರಣ ಮಾಡುವ ವಿಚಾರದಲ್ಲಿ ಪತಿ ಮತ್ತು ಪತ್ನಿಯ ನಡುವೆ ಗೊಂದಲವೇರ್ಪಟ್ಟಿದ್ದು, ಆಕೆ ಅಪ್ಪಟ ಪರಂಪರಾಗತ ಹೆಸರನ್ನೇ ಇಡುವಂತೆ ಒತ್ತಾಯಿಸುತ್ತಾಳೆ. ಆದರೆ ಕುಟುಂಬದ ಇತರ ಸದಸ್ಯರು ಅರಬಿಯಲ್ಲಿರುವ ಯಾವುದಾದರೊಂದು ಹೆಸರನ್ನು ಇರಿಸಿಕೊಳ್ಳುವಂತೆ ಸೂಚಿಸಿದ್ದಾರೆ. ಮಗುವಿಗೆ ಅರಬಿಯಲ್ಲೇ ಹೆಸರಿಡಬೇಕೆಂದಿದೆಯೇ? ಅರಬಿಯೇತರ ಭಾರತೀಯ ಭಾಷೆಗಳಲ್ಲಿ ಹೆಸರು ಇಡುವುದಕ್ಕೆ ವಿರೋಧ ಇದೆಯೇ?**

ಉ: ಮುಸ್ಲಿಮ್ ಕುಟುಂಬದಲ್ಲಿ ಹುಟ್ಟಿದ ಮಗುವಿಗೆ ಇಂತಿಂತಹ ಹೆಸರನ್ನೇ (ಉದಾ: ಪರಂಪರಾಗತ) ಇರಿಸಬೇಕೆಂಬ ನಿಯಮವಿಲ್ಲ. ಆದರೆ ಮಗುವಿಗೆ ಹೆಸರಿಡುವಾಗ ಕೆಳಗಿನ ತತ್ವಗಳನ್ನು ಗಮನಿಸಬೇಕಾದುದು ಅವಶ್ಯಕ.

1. ಹೆಸರು ಉತ್ತಮವಾಗಿರಬೇಕು. ಕರೆಯುವಾಗ ಅಸಭ್ಯ ಅರ್ಥ ಧ್ವನಿಸುವಂತಿರಬಾರದು. ಮಗು ದೊಡ್ಡವನಾದ ಮೇಲೆ ಸ್ವತಃ ತನ್ನ ಹೆಸರನ್ನು ಅಸಹ್ಯವಾಗಿ ಕಾಣುವಂತಿರಬಾರದು. ಅಶುಭ ಸೂಚಕವಾಗಿದ್ದಲ್ಲಿಯೂ ಅಸಭ್ಯ ಆಶಯ ಹೊಂದಿದ್ದರೆ ಇಲ್ಲವೇ ಮಕ್ಕರು, ದುರ್ಜನರ ಹೆಸರಾಗಿದ್ದಲ್ಲಿ ಅವುಗಳನ್ನು ಬದಲಿಸಿ ಉತ್ತಮ ಹೆಸರನ್ನು ಇರಿಸಿಕೊಳ್ಳಬೇಕು. ಪ್ರವಾದಿ(ಸ)ರವರು ಕೆಲವು ಸಂಗಾತಿಗಳ ಕೆಟ್ಟ ಹೆಸರನ್ನು ಬದಲಿಸಿ ಉತ್ತಮ ಹೆಸರುಗಳನ್ನಿರಿಸಿದ ಬಗ್ಗೆ ಹದೀಸ್‌ಗಳಲ್ಲಿ ವಿವರಣೆ ಇದೆ.

2. ಅಲ್ಲಾಹು ಅಲ್ಲದವರ ದಾಸ/ದಾಸಿ ಎಂಬ ಅರ್ಥ/ವಿಚಾರದ ಉದಾ: ಅಬ್ದುಲ್ ಮುಸ್ತಫಾ, ಅಬ್ದುಲ್ ಕಅ್‌ಬ್, ಅಬ್ದುಲ್ ಹುಸೈನ್ ಇತ್ಯಾದಿ ಅಲ್ಲಾಹೇತರರ ಜತೆಗೆ ಅಬ್ದ್ ಸೇರಿಸಿ ಹೆಸರಿಡಬಾರದು ಎಂಬ ವಿಚಾರದಲ್ಲಿ ವಿದ್ವಾಂಸರ ಮಧ್ಯೆ ಇಜ್ಮಾಅ್ ಇದೆ ಎಂದು ಇಬ್ನ್ ಹಝ್ಮ್(ರ) ಹೇಳಿದ್ದಾರೆ.

3. ಹೆಸರು ಅತಿರೇಕ ಮತ್ತು ಅತಿ ಮಹತ್ವಿಕೆಯಿಂದ ಕೂಡಿರಬಾರದು. ಕಾರಣ ಪ್ರವಾದಿ(ಸ)ರವರು ಹೀಗೆ ಹೇಳಿರುವರು: "ಅಂತ್ಯ ದಿನದಲ್ಲಿ ಒಬ್ಬನನ್ನು ಮಾಲಿಕುಲ್ ಮುಲೂಕ್ (ರಾಜಾಧಿರಾಜ) ಎಂದು ಕರೆಯಲ್ಪಡುವುದಾಗಿದೆ ಅತ್ಯಂತ ಕೆಟ್ಟನಾಮ". (ಹದೀಸ್) ಅದೇ ರೀತಿ ಅಲ್ಲಾಹನ ಪ್ರತ್ಯೇಕ ನಾಮಗಳಾಗಿರುವ ಅಸ್ಮಾಉಲ್ ಹುಸ್ನಾವನ್ನು ಸಹಾ ಹೆಸರಿಗಾಗಿ ಬಳಸಬಾರದು. ಆದರೆ "ಅಲ್" ಪ್ರತ್ಯಯವನ್ನು ಸೇರಿಸದೆ ಅಲ್ಲಾಹನ ನಾಮಗಳನ್ನು ಉಪಯೋಗಿಸುವುದಕ್ಕೆ ವಿರೋಧವಿಲ್ಲ. ಏಕೆಂದರೆ ಸಹಾಬಿಗಳು ಈ ರೀತಿ ಹೆಸರು ಕರೆದಿದ್ದ ನಿದರ್ಶನವಿದೆ. ಉದಾ: ಅಲಿ, ಹಕೀಂ ಇದೇ ರೀತಿ ಅಝೀಝ್, ಹಲೀಂ, ರವೂಫ್, ಕರೀಂ, ರಶೀದ್, ಹಾದಿ, ನಾಫಿಅ್ ಮುಂತಾದವುಗಳನ್ನು ಯಥಾವತ್ತಾಗಿ ಬಳಸುವುದು ಸಮ್ಮತಾರ್ಹವಾಗಿದೆ.

4. ಪ್ರವಾದಿಗಳು ಮತ್ತು ಸಜ್ಜನ ಮಹಾಪುರುಷರ ಹೆಸರುಗಳನ್ನು ಅವರ ಸ್ಮರಣೆ ಚಿರಂತನಗೊಳಿಸಲು ಮತ್ತು ಅವರ ಆದರ್ಶ ಪ್ರಕಾರ ನಡೆಯಲು ಜೀವನದಲ್ಲಿ ಸ್ಫೂರ್ತಿ ಪಡೆಯಲಿಕ್ಕಾಗಿ ಇಟ್ಟುಕೊಳ್ಳಬಹುದಾಗಿದೆ. ಅಲ್ಲಾಹನಿಗೆ ಅತ್ಯಂತ ಇಷ್ಟವಿರುವ ಹೆಸರು ಅಬ್ದುಲ್ಲ ಮತ್ತು ಅಬ್ದುರ್ರಹ್ಮಾನ್ ಎಂದು ಹದೀಸ್‌ನಲ್ಲಿ ಬಂದಿರುವುದರಿಂದ ಈ ಹೆಸರುಗಳಿಗೆ ಪ್ರಾಧಾನ್ಯತೆ ಕಲ್ಪಿಸಬೇಕು.

5. ಉತ್ತಮ ಹೆಸರಾಗಿದ್ದರೆ ಅರಬಿಯೇತರ ಭಾಷೆಯಲ್ಲಿ ಹೆಸರಿಡುವುದಕ್ಕೆ ವಿರೋಧವಿಲ್ಲ. ಇಸ್ಲಾಮ್ ಸ್ವೀಕರಿಸಿದ ನಂತರವೂ ಅರಬಿ ಅಲ್ಲದ ಪರಕೀಯ ಹೆಸರುಗಳನ್ನು ಹಾಗೆಯೇ ಉಳಿಸಿಕೊಂಡ ಅನೇಕ ಮಂದಿ ಇದ್ದಾರೆ. ಅರಬಿ ಸಂಸ್ಕೃತಿ, ನಾಗರಿಕತೆಗಳ ನಡುವೆಯೇ ಇದ್ದುಕೊಂಡೂ ಅವರು ತಮ್ಮ ಹೆಸರುಗಳನ್ನೇನೂ ಬದಲಿಸಲಿಲ್ಲ ಎನ್ನುವುದೂ ಗಮನಾರ್ಹ. ಪ್ರವಾದಿ(ಸ)ರವರ ಪುತ್ರ ಇಬ್ರಾಹೀಮ್‌ರ ತಾಯಿ ಮಾರಿಯತುಲ್ ಖಿಬ್ತಿಯಾ ಈಜಿಪ್ಟ್‌ನ ಖಿಬ್ತಿ ಜನಾಂಗದವರ ಹೆಸರಿನಿಂದಲೇ ಪ್ರಸಿದ್ಧರು.

ಸಹಾಬಿಗಳು ಮತ್ತು ತಾಬಿಉಗಳ ಹೆಸರುಗಳನ್ನು ಗಮನಿಸಿದರೆ ಅವರಲ್ಲಿ ಅನೇಕರಿಗೆ ಗಿಡ-ಬಳ್ಳಿಗಳ ಹೆಸರಿದೆ. ಉದಾ: ತ್ವಲ್‌ಹ, ಸಲಮ, ಹಂಳಲ, ಪಕ್ಷಿ ಮತ್ತಿತರ ಜೀವಿಗಳ ಹೆಸರಿರುವ ಸಹಾಬಿಗಳೂ ಇದ್ದಾರೆ. ಉದಾ: ಅಸದ್, ಫಹ್‌ದ್, ಹೈಸಂ, ಸುರ್ರ್. ಪ್ರಕೃತಿ ಪದಾರ್ಥಗಳ ಹೆಸರಿರುವ ಸಹಾಬಿಗಳಿದ್ದಾರೆ. ಉದಾ: ಬಹ್‌ರ್, ಜಬಲ್, ಸಖ್‌ರ್, ಬೇರೆ ಕೆಲವರಿಗೆ ಕೆಲವು ಪ್ರತ್ಯೇಕ ಗುಣ ವಿಶೇಷಣಗಳ ಹೆಸರಿದೆ. ಉದಾ: ಆಮಿರ್, ಸಾಲಿಮ್, ಉಮರ್, ಸಈದ್, ಫಾತಿಮ, ಆಯಿಶಾ, ಸ್ವಫಿಯ್ಯ. ಈ ವಿವರಣೆ ಪ್ರಕಾರ ಮೇಲಿನ ನಿಬಂಧನೆಗಳಿಗನುಸಾರವಾಗಿ ಮಗುವಿಗೆ ಅರಬಿಯಲ್ಲಾಗಲಿ ಇನ್ನಿತರ ಭಾಷೆಯಲ್ಲಾಗಲೀ ಹೆಸರಿಡುವುದಕ್ಕೆ ಯಾವುದೇ ವಿರೋಧವಿಲ್ಲ.

**-ಶೈಖ್ ಅಲ್ಲಾಮ ಯೂಸುಫ್**

**ಪ್ರ: ಒಂದೆಡೆ ನಲ್ವತ್ತು ಮಂದಿ ಜಮಾಯಿಸಿದರೆ ಅವರಲ್ಲಿ ಓರ್ವ ಅಲ್ಲಾಹನ ವಲಿಯ್ಯ್ ಇರುತ್ತಾರೆ ಎಂಬ ನಂಬಿಕೆ ಸುನ್ನಿಗಳಲ್ಲಿದೆ. ಈ ನಂಬಿಕೆ ಪ್ರಮಾಣಬದ್ಧವೇ?**

ಉ: ಇಂತಹ ಅನೇಕ ಅಂಧಶ್ರದ್ಧೆಗಳು ಸುನ್ನಿಗಳಿಗಿದೆ. ಸುನ್ನಿಗಳು ಹೊಂದಿರುವ "ವಲಿಯ್ಯ್" ಎಂಬ ಕಲ್ಪನೆ ಕುರ್‌ಆನ್ ಮತ್ತು ಸುನ್ನತ್ ಪರಿಚಯಿಸಿರುವ ವಲಿಯ್ಯ್‌ಗಿಂತ ವಿಪರೀತವಾದುದು.

ಪವಿತ್ರ ಕುರ್‌ಆನ್ ಮತ್ತು ಸುನ್ನತ್‌ನಲ್ಲಿ ಹೇಳಿರುವಂತೆ ಯಾರೂ ಅಲ್ಲಾಹನಿಗೆ ತಕ್ವಾ ಮಾಡಿ ಅವನ ಆಜ್ಞಾದೇಶಗಳಿಗೆ ಸಂಪೂರ್ಣ ತಲೆಬಾಗಿ ಬದುಕುವರೋ ಅವರೇ ನಿಜವಾದ ಔಲಿಯಾಗಳು. ಅಂತಹವರಿಗೆ ಪ್ರತ್ಯೇಕ ಐಡೆಂಟಿಟಿ ಅಥವಾ ವೇಷಭೂಷಣಗಳಿರುವುದಿಲ್ಲ. ಪ್ರವಾದಿ(ಸ)ರವರ ಅನುಚರರಾದ ಸಹಾಬಿಗಳೆಲ್ಲರೂ ಶ್ರೇಷ್ಠ ಔಲಿಯಾಗಳಾಗಿದ್ದರು. ಅವರು ಅತ್ಯಂತ ಸರಳವಾಗಿ ಸಾಮಾನ್ಯ ಜನರಂತೆ ಬದುಕಿದರು. ಅವರ ನಡುವೆ "ವಲಿಯ್ಯ್" ಯಾರು ಎಂದು ಪತ್ತೆ ಹಚ್ಚುವ ಕ್ರಮ ಎಂದೂ ನಡೆದಿರಲಿಲ್ಲ. ಆದುದರಿಂದ ಯಾವುದಾದರೊಂದು ಸಭೆ ಇಲ್ಲವೇ ಪ್ರತ್ಯೇಕ ಗುಂಪಿನಲ್ಲಿ ಓರ್ವ ವಲಿಯ್ಯ್ ಇರುತ್ತಾರೆ ಎಂಬ ನಂಬಿಕೆ ಇಸ್ಲಾಮಿಗೆ ಅನ್ಯವಾದುದು.

"ಯಾವುದೇ ಒಂದು ಗುಂಪು ಜನರು ಒಗ್ಗೂಡಿದಾಗ ಅವರಲ್ಲಿ ಅಲ್ಲಾಹನ ವಲಿಯ್ಯ್ ಒಬ್ಬನಿರುತ್ತಾನೆ" ಎಂಬ ಹದೀಸ್‌ನ ತಳಹದಿಯಲ್ಲಿ ಹುಟ್ಟಿಕೊಂಡ ನಂಬಿಕೆ ಇದು. ಈ ಹದೀಸ್ ನಿರಾಧಾರವೂ ಕೃತಕವೂ ಆಗಿದೆ. "ಒಂದು ಗುಂಪು ಜನರು" ಎಂದಿರುವುದರಲ್ಲಿ ಮುಸ್ಲಿಮರಷ್ಟೇ ಅಲ್ಲ, ಕ್ರೈಸ್ತರು, ಯಹೂದಿಗಳು, ಬೌದ್ಧರು, ಮಜೂಸಿಗಳು ಮತ್ತಿತರ ಅನ್ಯಮತೀಯರೆಲ್ಲರೂ ಒಳಪಡುತ್ತಾರೆ.

ಇಂತಹವರು ಒಂದೆಡೆ ಒಗ್ಗೂಡುವಾಗ ಅವರಲ್ಲಿ ಒಬ್ಬ ಅಲ್ಲಾಹನ ವಲಿಯ್ಯ್ ಇರುತ್ತಾರೆ ಎಂದು ಸ್ವತಃ ಸುನ್ನಿಗಳೇ ಒಪ್ಪಿಕೊಂಡಂತಾಗುತ್ತದೆ. ಈ ನಂಬಿಕೆ ಪ್ರಮಾಣ ವಿರುದ್ಧವೂ ಅನಿಸ್ಲಾಮಿಕವೂ ಆಗಿದೆ.

**-ಶೈಖ್ ಖಾಲಿದ್ ಬಿನ್ ನಾಸಿರ್ ಬಿನ್ ಸಈದ್ ಅಲ್‌ಗಾಮಿದಿ**

وَهُوَ الْقَاهِرُ فَوْقَ عِبَادِهِ ۚ وَهُوَ الْحَكِيمُ الْخَبِيرُ ﴿١٨﴾

ತನ್ನ ದಾಸರ ಮೇಲೆ ಸರ್ವಾಧಿಕಾರಿಯಾಗಿರುವವನು ಅವನೇ ಮತ್ತು ವಿವೇಕಪೂರ್ಣನೂ ಸೂಕ್ಷ್ಮಜ್ಞನೂ ಅವನೇ. (6x18)

لَا يَدْخُلُ الْجَنَّةَ نَمَّامٌ

ಪರದೂಷಣೆ ಮಾಡುವವರು ಸ್ವರ್ಗ ಪ್ರವೇಶಿಸಲಾರರು.

(ಸಹೀ ಮುಸ್ಲಿಮ್ 290)

# ರಹ್ಮಾನನ ಆಜ್ಞೆಯನ್ನು ಉಲ್ಲಂಘಿಸದವರು

(7ನೇ ಪುಟದಿಂದ)

ಮಕ್ಕಾದ ಬಹುದೇವಾರಾಧಕರಲ್ಲಿ ಮಲಕ್‌ಗಳು ಅಲ್ಲಾಹನ ಹೆಣ್ಮಕ್ಕಳೆಂಬ ವಿಶ್ವಾಸವಿತ್ತು. ಕ್ರೈಸ್ತರಲ್ಲಿ ಅವರು ಸ್ತ್ರೀಗಳೆಂದು ಭಾವಿಸುವ ಸಂಪ್ರದಾಯ ಇಂದಿಗೂ ರೂಢಿಯಲ್ಲಿದೆ. ಕುರ್‌ಆನ್ ಈ ಎರಡು ಅಭಿಪ್ರಾಯಗಳನ್ನು ನಖಶಿಖಾಂತ ವಿರೋಧಿಸುತ್ತದೆ: "ರಹ್ಮಾನನ ದಾಸರಾದ ಮಲಕ್‌ಗಳನ್ನು ಇವರು ಸ್ತ್ರೀ ಜಾತಿಯಾಗಿ ನಿಶ್ಚಯಿಸಿದರು. ಅವರ ಸೃಷ್ಟಿಯ ಸಮಯದಲ್ಲಿ ಇವರು ಹಾಜರಿದ್ದರೇ? ಇವರ ಸಾಕ್ಷ್ಯವನ್ನು ಬರೆದಿಡಲಾಗುವುದಲ್ಲದೆ, ಇವರೊಡನೆ ವಿಚಾರಣೆಯೂ ನಡೆಯುವುದು". (ಕುರ್‌ಆನ್ 43:19) "ಪರಲೋಕದಲ್ಲಿ ವಿಶ್ವಾಸವಿಡದವರು ದೇವಚರರಿಗೆ ಸ್ತ್ರೀಯರಿಗಿರುವ ಹೆಸರುಗಳನ್ನಿಡುತ್ತಾರೆ. ಈ ಬಗ್ಗೆ ಅವರಲ್ಲಿ ಏನೂ ಜ್ಞಾನವಿಲ್ಲ, ಅವರು ಕೇವಲ ಗುಮಾನಿಯನ್ನೇ ಅನುಸರಿಸುತ್ತಾರೆ. ಗುಮಾನಿಯಾದರೋ ಸತ್ಯದೆದುರು ಏನೂ ಫಲ ಕೊಡದು." (ಕುರ್‌ಆನ್ 53:27, 28)

ಮಲಕ್‌ಗಳನ್ನು ಆರಾಧಿಸುತ್ತಿದ್ದ ಮಕ್ಕಾದ ಬಹುದೇವ ವಿಶ್ವಾಸಿಗಳನ್ನು ಕುರ್‌ಆನ್ ಖಂಡಿಸಿದೆ. ಅಲ್ಲಾಹನಲ್ಲದೆ ಇತರ ಆರಾಧ್ಯರಾರೂ ಇಲ್ಲವೆಂಬುದೇ ಕುರ್‌ಆನ್‌ನ ಪ್ರಧಾನ ಶಿಕ್ಷಣವಾಗಿದೆ. ಮಲಕ್‌ಗಳು ಅಲ್ಲಾಹನ ಅನುಸರಣೆಯ ಗುಣ ವಿಶೇಷತೆಗಳನ್ನೊಳಗೊಂಡ ಪ್ರತ್ಯೇಕ ಸೃಷ್ಟಿಗಳಾಗಿದ್ದಾರೆ. ಅವರ ಅಸ್ತಿತ್ವದ ಮೇಲೆ ವಿಶ್ವಾಸಿಗಳ ಮೇಲೆ ಕಡ್ಡಾಯವಾಗಿದೆ. ಮಲಕ್‌ಗಳ ಮೇಲಿನ ವಿಶ್ವಾಸದ ಮೂಲಕ ಮನುಷ್ಯರು ಅಲ್ಲಾಹನ ಅಜೇಯತೆಯ ಕುರಿತು ಪ್ರಜ್ಞಾಶಾಲಿಗಳಾಗುತ್ತಾರೆ. ಈ ರೀತಿಯಿಂದ ಮಾನವರು ಆತ್ಮೋನ್ನತಿಯ ಹಾದಿಯತ್ತ ಸಾಗಿಸಲ್ಪಡುತ್ತಾರೆ. •

# ಕುರ್‌ಆನ್ ಉಪಮಿಸಿದ ನಾಲ್ಕು ಮಹಿಳೆಯರು

(1ನೇ ಪುಟದಿಂದ)

ಅದೇ ರೀತಿ ಅಲ್ಲಾಹನ ಔಲಿಯಾಗಳೊಂದಿಗೆ ಸಂಬಂಧವಿದೆ ಎಂದ ಮಾತ್ರಕ್ಕೆ ಯಾರಿಗೂ ಮೋಕ್ಷಗೊಳಿಸಲು ಸಾಧ್ಯವಿಲ್ಲ. ಸತ್ಯವಿಶ್ವಾಸ ಸ್ವೀಕರಿಸಿ ಸತ್ಕರ್ಮಗಳನ್ನೆಸಗುವ ಮೂಲಕ ಅಲ್ಲಾಹನ ಸಂಪ್ರೀತಿಗೆ ಪಾತ್ರರಾಗುವುದೇ ಮೋಕ್ಷ ಪಡೆಯಲಿಕ್ಕಿರುವ ಏಕೈಕ ಮಾರ್ಗ.

ಸತ್ಯ ವಿಶ್ವಾಸಿಗಳಿಗೆ ಮಾದರಿ ಎಂಬ ರೀತಿಯಲ್ಲಿ ಇನ್ನಿಬ್ಬರು ಮಹಿಳೆಯರನ್ನು ಕುರ್‌ಆನ್ ಪರಿಚಯಿಸುತ್ತದೆ. ಒಬ್ಬರು ಧಿಕ್ಕಾರಿಯಾದ ಫಿರ್‌ಔನನ ಪತ್ನಿಯಾಗಿದ್ದರೆ ಇನ್ನೊಬ್ಬರು ಈಸಾ(ಅ)ರವರ ಮಾತೆ ಮರ್ಯಮ್(ಅ)ರವರಾಗಿದ್ದರೆ.

وَضَرَبَ اللَّهُ مَثَلًا لِّلَّذِينَ آمَنُوا امْرَأَتَ فِرْعَوْنَ إِذْ قَالَتْ رَبِّ ابْنِ لِي عِندَكَ بَيْتًا فِي الْجَنَّةِ وَنَجِّنِي مِن فِرْعَوْنَ وَعَمَلِهِ وَنَجِّنِي مِنَ الْقَوْمِ الظَّالِمِينَ ﴿١١﴾

وَمَرْيَمَ ابْنَتَ عِمْرَانَ الَّتِي أَحْصَنَتْ فَرْجَهَا فَنَفَخْنَا فِيهِ مِن رُّوحِنَا وَصَدَّقَتْ بِكَلِمَاتِ رَبِّهَا وَكُتُبِهِ وَكَانَتْ مِنَ الْقَانِتِينَ ﴿١٢﴾

ಸತ್ಯವಿಶ್ವಾಸಿಗಳಿಗೊಂದು ಉದಾಹರಣೆಯಾಗಿ ಅಲ್ಲಾಹು ಫಿರ್‌ಔನನ ಪತ್ನಿಯನ್ನು ಎತ್ತಿ ತೋರಿಸುತ್ತಾನೆ. ಅದೇನೆಂದರೆ ಅವಳು "ನನ್ನ ಪ್ರಭೂ, ನನಗೆ ನಿನ್ನ ಬಳಿ ಸ್ವರ್ಗದಲ್ಲೊಂದು ಭವನವನ್ನು ನಿರ್ಮಿಸಿ ಕೊಡು ಮತ್ತು ನನ್ನನ್ನು ಫಿರ್‌ಔನನಿಂದಲೂ ಅವನ ಕುಕೃತ್ಯಗಳಿಂದಲೂ ರಕ್ಷಿಸು ಮತ್ತು ಅಕ್ರಮಿಗಳಾದ ಜನರಿಂದಲೂ ನನ್ನನ್ನು ನೀನು ರಕ್ಷಿಸು" ಎಂದು ಹೇಳಿದ ಸಂದರ್ಭ.

ಮತ್ತು ತನ್ನ ಪರಿಶುದ್ಧತೆಯನ್ನು ಕಾಪಾಡಿಕೊಂಡಿದ್ದ ಇಮ್ರಾನನ ಪುತ್ರಿ ಮರ್ಯಮಳನ್ನೂ (ಉದಾಹರಣೆಯಾಗಿ ತೋರಿಸುತ್ತಾನೆ). ಹಾಗೆ ನಾವು ನಮ್ಮ (ವತಿಯ) ರೂಹ್‌ನಿಂದ (ಜಿಬ್ರೀಲ್‌ನ ಮೂಲಕ) ಅದರೊಳಗೆ (ಅವಳ ಶರೀರದೊಳಗೆ) ಊದಿದೆವು. ಮತ್ತು ಅವಳು ತನ್ನ ಪ್ರಭುವಿನ ವಚನಗಳನ್ನೂ ಅವನ ಗ್ರಂಥಗಳನ್ನೂ ದೃಢೀಕರಿಸಿದ್ದಳು ಮತ್ತು ಅವಳು ಭಕ್ತರಲ್ಲಿ ಸೇರಿದವಳಾಗಿದ್ದಳು.

(66x11, 12)

